# ಕಡಿಮೆ ಹಣ ಖರ್ಚು ಮಾಡಿ
# ಹೆಚ್ಚು ಬಟ್ಟೆಗಳನ್ನು ಒಗೆಯಿರಿ

- ಇದೀಗ ನೀವು ಸಾಬೂನಿಗೆ ಕಡಿಮೆ ಹಣ ಖರ್ಚು ಮಾಡಿ ಹೆಚ್ಚು ಬಟ್ಟೆಗಳನ್ನು ಒಗೆಯಬಹುದು.
- ಕಸ್ತೂರಿ ನೀಲಂ ಹಾಗೂ ಕಸ್ತೂರಿ ಬಾರ್ ಸೋಪ್ ಉಪಯೋಗಿಸುವುದರಿಂದ ಇದು ಸಾಧ್ಯ.
- ಕಸ್ತೂರಿ ಸಾಬೂನುಗಳು ಬಹು ಉಳಿತಾಯಕರವಾದುವು ಅಲ್ಲದೆ, ಪ್ರತಿ ಬಾರ್ ಸೋಪಿನಿಂದಲೂ ಹೆಚ್ಚು ಬಾರಿ ಒಗೆಯಲು ಸಾಧ್ಯವಾಗುತ್ತದೆ.
- ಇದರಲ್ಲಿ ವಿಶೇಷ ಡಿಟರ್ಜೆಂಟುಗಳು ಮಿಶ್ರಿತವಾಗಿರುವುದರಿಂದ ನಿಮ್ಮ ಉಡುವುಗಳು ಬಿಳುಪಿಗಿಂತಲೂ ಅತ್ಯಧಿಕ ಉಜ್ವಲವಾಗಿರುತ್ತವೆ.

ಕಸ್ತೂರಿ ಸಾಬೂನುಗಳನ್ನು ಇಂದೇ ಉಪಯೋಗಿಸಿರಿ

'ಕಸ್ತೂರಿ'
ಬಾರ್ ಸೋಪ್

'ಕಸ್ತೂರಿ'
ನೀಲಂ ಬಾರ್ ಸೋಪ್

ತಯಾರಕರು:

## ರಾಮಕೃಷ್ಣ ಆಯಿಲ್ ಮಿಲ್, ತುಮಕೂರು.

# ಸಿದ್ಧಗಂಗಾ

ಸಂಪುಟ-೨೨ ಸಂಚಿಕೆ-೧೧ ನವಂಬರ್, ೧೯೮೬

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಹಾಲಾಹಲವೆದ್ದು ಕೋಲಾಹಲ ನಡೆದಿಹುದು
ಲೀಲಾ ಮೂರುತಿಯೆ ನನ್ನ ತಂದೆ। ಶರಣೇಶ
ಸಿದ್ಧಗಂಗಾ ಗುರುವೇ ಕೃಪೆಯಾಗು ॥

* * *

ಕೈಹಿಡಿದು ಕರೆತಂದ ಹೂವು ಅರಳದಿರಲು
ನೀ ನೊಂದು ಹಣ್ಣಾದೆ ನನ್ನ ತಂದೆ। ಶರಣೇಶ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

* * *

ಊರರಿಯುದು ಉಪಕಾರ ಹೆಣ ತಿಳಿಯುದು ಶೃಂಗಾರ
ಮೇರು ಗುಣ ಕಾಣದು ಹೀನರೊಳು। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

—ಹೆಚ್.ವಿ. ವೀರಭದ್ರಯ್ಯ.

# ಸಿದ್ಧಗಂಗಾಂತರಂಗ



# ಶ್ರೀವಾಣಿ

‘ಆಪ್ತವಾಕ್ಯ’ ಇದೊಂದು ಶಾಸ್ತ್ರವಾಕ್ಯ, ‘ಆಪ್ತರು’ ಎಂದರೆ ನಮಗೆ ಇಷ್ಟವಾದವರು. ನಮ್ಮ ಹತ್ತಿರದವರು, ನಮ್ಮ ನಂಬಿಕೆಗೆ ಅರ್ಹರಾದವರು. ನಮ್ಮ ಹಿತ ಚಿಂತಕರು. ನಮ್ಮ ಆತ್ಮೀಯರು. ಇಂತಹವರು ಹೇಳಿದ ವಾಕ್ಯ, ಅಂದರೆ ಮಾತು. ಅಷ್ಟೇ ಅಲ್ಲ ಅಸು ಮಾಣಿಕ್ಯದ ಮುತ್ತು. ಒಂದು ವಿಷಯ ಅಥವಾ ಒಬ್ಬವ್ಯಕ್ತಿಯ ವಿಷಯ ನಮ್ಮ ಕಿವಿಯ ಮೇಲೆ ಬಿದ್ದಾಗ, ಯಾರು ಈ ವಿಷಯ ಹೇಳಿದವರು. ಎಂದು ಪ್ರಶ್ನೆ ಮಾಡುತ್ತೇವೆ. ಇದು ಮಾನವ ಸಹಜವಾದುದು. ಕಾರಣವಿಷ್ಟೆ ಆ ವಿಷಯ ನಡೆದಿದೆಯೋ ಇಲ್ಲವೋ ಎಂದು ವಿಮರ್ಶೆ ಮಾಡುವುದಕ್ಕೆ ಮೊದಲು ಈ ವಿಷಯವನ್ನು ಹೆಳಿದವರು ಯಾರು ? ಎಂದು ಕೇಳುತ್ತೇವೆ. ಹೇಳಿದವನ ವ್ಯಕ್ತಿತ್ವ, ಗುಣ, ನಡತೆ' ಚಾರಿತ್ರ್ಯದ ಮೇಲೆ ವಿಷಯದ ಸತ್ಯಾಸತ್ಯತೆ ನಿಲ್ಲುತ್ತದೆ. ಆ ವ್ಯಕ್ತಿ ಗಳಿಸಿರುವ ವಿದ್ಯೆ, ಸಾಧಿಸಿದ ಸಾಧನೆ, ತಿರುಗಾಡುವ ಸಹವಾಸ' ಅವನಿರುವ ಸ್ಥಾನ-ಮಾನಗಳ ಮೇಲೂ ವಸ್ತುಸ್ಥಿತಿಯನ್ನು ನಿರ್ಣಯಿಸಬಹುದು. ಜಗತ್ತಿನಲ್ಲಿ ಎಲ್ಲರೂ ಎಲ್ಲವನ್ನ ನೋಡಿರುವುದಿಲ್ಲ ನೋಡಲು ಸಾಧ್ಯವೂ ಇಲ್ಲ, ಹಾಗೆ ತಿಳಿಯುವುದೂ ಕೂಡ ಸಾಧ್ಯವಿಲ್ಲ. ಸಾಧ್ಯವಿದ್ದರೂ ಸಾಮರ್ಥ್ಯವಿರುವುದಿಲ್ಲ. ಆದ್ದರಿಂದ ಕೆಲವರು ಕೆಲವನ್ನು ನೋಡಿರುತ್ತಾರೆ. ತಿಳಿದ ಪಡೆದ ಸಾಧನೆಯನ್ನು ಹಲವರಿಗೆ ಹಂಚುವ ತಿಳಿಸುವ ಮನಸ್ಸು ಮಾಡುತ್ತಾರೆ. ತಮ್ಮ ಅನುಭವ ವಾಣಿಯಿಂದ ಎಲ್ಲರಿಗೂ ಉಪದೇಶಿಸಿ ತಿಳಿಸುವ ಅನುಗ್ರಹ ಮಾಡುತ್ತಾರೆ. ಸತ್ಯಸಂಗತಿಯನ್ನು ಹೊರಗೆಡಹುತ್ತಾರೆ. ಅದನ್ನು ಕೇಳಿದ ಸಾಮಾಜಿಕರು ಗ್ರಹಿಸುತ್ತಾರೆ. ಗ್ರಹಿಸಿ ವಿಚಾರಪರರಾಗುತ್ತಾರೆ. ಅವರಲ್ಲಿರುವ ವಿಶ್ವಾಸದಿಂದ ನಂಬುತ್ತಾರೆ. ಕಾರಣವಿಷ್ಟೆ, ನಮ್ಮವರು ಹೇಳಿದ್ದು, ನಮ್ಮ ಹಿರಿಯರು ಹೇಳಿದ್ದು, ನಮ್ಮ ಪೂಜ್ಯರೂ ಗುರುಗಳೂ ಹೆಳಿದ್ದು ಎಂದು. ಆದ್ದರಿಂದ ಯಾವುದೇ ವಿಷಯವನ್ನು ನಂಬಿ ನಡೆಯಬೇಕಾದರೆ: ವಿಷಯವನ್ನು ಹೊರಗೆಡವಿದವರ ನಡೆನುಡಿ, ಸಾಧನೆ ಚಾರಿತ್ರ್ಯಗಳು ಅತ್ಯಂತ ಮುಖ್ಯವೆಂದು ಪರಿಗಣಿಸಬೇಕಾಗುತ್ತದೆ.

## "ಸಿದ್ಧಗಂಗಾ" ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಮಠ-572104
ತುಮಕೂರು ಜಿಲ್ಲೆ.

ಪ್ರಧಾನ ಸಂಪಾದಕರು
ಪಂ॥ ಚನ್ನಪ್ಪ ಎರೇಸೀಮೆ
ಸಂಪಾದಕರು
ಹೆಚ್. ವಿ. ವೀರಭದ್ರಯ್ಯ

* * *

ಸಹ ಸಂಪಾದಕರು
ಸಿ. ಎಸ್. ಚಂದ್ರಶೇಖರಯ್ಯ
ಬಸವರಾಜು

* * *

ಜಾಹೀರಾತು ವಿಭಾಗ
ಎಂ. ರೇಣುಕಾರಾಧ್ಯ

* * *

ಪ್ರಸಾರ ವಿಭಾಗ
ಆರ್. ಎಸ್. ಮಲ್ಲೇಶಪ್ಪ

* * *

ಪ್ರಕಾಶಕರು
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ
ಮುದ್ರಣಾಲಯ

* * *

ಪ್ರಕಟಣೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ

### ಚಂದಾ ವಿವರ

ವಾರ್ಷಿಕ ಚಂದಾ 20-00 ರೂ
ಆಜೀವ ಸದಸ್ಯತ್ವ 201-00 ರೂ

### ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ ವೈಚಾರಿಕ, ಚಿಂತನ, ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್ ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಚೀಟಿಯನ್ನು ಲಗತ್ತಿಸಿರಲೇಬೇಕು. ಲೇಖನಗಳು ಅಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ 'ಅಧಿಕಾರ' ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ಸಿಗದಿ ಹಿಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರಹಗಾರರಿಗೆ ಆದ್ಯತೆ ಕೊಡಲಾಗುವುದು.

"ಸಂಪಾದಕರು"
'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾ ಕ್ಷೇತ್ರ-572104
ತುಮಕೂರು ಜಿಲ್ಲೆ.
ಇವರಿಗೆ ಕಳುಹಿಸಿಕೊಡಬೇಕಾಗಿ ಪ್ರಾರ್ಥನೆ.

## ಂಪಾದಕೀಯ

### ಎಲ್ಲೆ ಮೀರಿದ ಅಪಪ್ರಚಾರ.

ಶ್ರೀ ಮಠದ ಪ್ರಕರಣದ ಬಗ್ಗೆ ಮತ್ತೆ ಮತ್ತೆ ಬರೆಯುವುದ ನಮಗೆ ಪ್ರಿಯ ದ ವಿಷಯವೇನೂ ಅಲ್ಲ. ಅಲ್ಲದೆ ನಮ್ಮ ಬಗ್ಗೆ ನಾವೇ ಬರೆದುಕೊಳ್ಳುವುದು ರೋಗ್ಯಕರವಾದುದೂ ಅಲ್ಲ. ಆದರೆ ಶ್ರೀ ಮಠದ ಭಕ್ತರು, ಪತ್ರಿಕೆಯ ಓದು ರು, ಅಭಿಮಾನಿಗಳು, ಸಾರ್ವಜನಿಕರು ನಿಮ್ಮದೇ ಪತ್ರಿಕೆಯೊಂದು ಇರುವಾಗ ಸ್ತುಸ್ಥಿತಿಯನ್ನು ಏಕೆ ತಿಳಿಸಬಾರದು ಎಂದು ಒತ್ತಾಯಿಸಿದಾಗ, ಅವರೆಲ್ಲರ ತಿಗೆ ಮಣಿದು ಬರೆಯಬೇಕಾಗಿದೆ.

ಪರಮ ಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರು ಯಾರ ಪ್ರಚಾ ದಿಂದಲೂ ದೊಡ್ಡವರಾದವರಲ್ಲ, ಯಾರ ಅಪಪ್ರಚಾರದಿಂದ ಸಣ್ಣವರೂ ಆಗು ವುದಿಲ್ಲ. ಬದಲಾಗಿ ಪ್ರಚಾರ, ಅಪಪ್ರಚಾರಗಳೇ ತಮ್ಮ ಯೋಗ್ಯತೆಯನ್ನು ಹೆಚ್ಚಿ ಕೊಳ್ಳುತ್ತವೆ, ಅಥವಾ ಇಳಿಸಿಕೊಳ್ಳುತ್ತವೆ. ನಮ್ಮ ದೈನಂದಿನ ಬದುಕಿನಲ್ಲಿ ಒಂದು ಣ್ಣ ವಿಷಯದಲ್ಲಿಯೂ ತ್ಯಾಗಕ್ಕೆ ಸಿದ್ಧರಿಲ್ಲದವರು ದೊಡ್ಡ ದೊಡ್ಡ ಮಾತುಗಳ ಾಡುತ್ತೇವೆ, ಅದೂ ವೇದಿಕೆಗಳ ಮೇಲೆ. ಒಂದು ಮಹಾ ಸಂಸ್ಥೆಯನ್ನು ಮೂಕ ಸ್ಥಿತವಾಗುವಷ್ಟು ಅಭಿವೃದ್ಧಿಗೆ ತಂದ ಪುಣ್ಯಮೂರ್ತಿಗಳನ್ನು ಕುರಿತು ಹಗು ವಾಗಿ ಮಾತನಾಡಿ ನಮ್ಮ "ಕೊಳಕು ಕೊಚ್ಚೆ" ಯನ್ನು ಹೊರ ಚೆಲ್ಲುತ್ತಿದ್ದೇವೆ. ಂದು ಮಾತು ಅಭಿವೃದ್ಧಿಯೆನ್ನುವುದು ಸಂಪನ್ಮೂಲಗಳ ಕ್ರೋಢೀಕರಣವಷ್ಟೇ ಅಲ್ಲ, ಂದು ಜೀವನದೃಷ್ಟಿಯನ್ನು ತೋರಿಸಿಕೊಡುವಂಥದು. ಪೂಜ್ಯ ಶ್ರೀ ಶ್ರೀಗಳವರು ಂಥ ಜೀವನದೃಷ್ಟಿಯನ್ನು ಸಹಸ್ರಾರು ಮಂದಿಗೆ ತೋರಿಸಿರುವಂಥವರು. ದಾಸೋ ಹಮಣಿಹವನ್ನು ಅವರ ಹಾಗೆ ಗೌರವದಿಂದ ನಡೆಸಿದ ಮತ್ತೊಬ್ಬ ಶ್ರೀ ಶ್ರೀಗಳ ರನ್ನು ಹುಡುಕುವುದು ಕಷ್ಟ. ಅಂಥ ಓರ್ವ ಶ್ರೀ ಶ್ರೀಗಳಿಂದ ಒಂದು ಜನಾಂಗ ಾರ್ಥಕವಾಗುತ್ತದೆ. ಅವರಿಂದ ಸೇವೆ ಮಾತ್ರ ನಡೆಯಲಿಲ್ಲ; ಸೇವೆಯ ಹಲವಂಶ ಗಳೂ ಸೃಷ್ಟಿಗೊಂಡಿವೆ. ಹೀಗಿರುವಾಗ ಪೂಜ್ಯ ಶ್ರೀ ಶ್ರೀಗಳವರ ಬಗ್ಗೆ ಅವ್ಯಾ ಹತವಾದ ಅಪಪ್ರಚಾರ ನಡೆಸುತ್ತಿರುವ ನಾವು ಆತ್ಮ ವಿಮರ್ಶೆ ಮಾಡಿಕೊಳ್ಳ ಬೇಕಾಗಿದೆ. ಇಂಥ ಅಪಪ್ರಚಾರಗಳಿಂದ ನಷ್ಟವಾಗುವುದು ಸಮಾಜಕ್ಕೆ ಎಂಬ ದೂರದೃಷ್ಟಿ ಬೇಡವೆ? "ಸ್ವಾಮಿಗಳಿಗೆ ವಯಸ್ಸಾಯಿತು, ಪಟ್ಟಭದ್ರ ಹಿತಾಸಕ್ತಿಗಳು ಅವರ ಮನಸ್ಸು ಕೆಡಿಸಿದ್ದಾರೆ" ಎಂಬ ಮಾತುಗಳು ಇಂದು ಕೇಳಬಂದಿವೆ,

ಬರುತ್ತಿವೆ. ಆಶ್ಚರ್ಯವೆಂದರೆ ಬರುವ 1-4-87ಕ್ಕೆ 79ನ್ನು ದಾಟಿ 80ಕ್ಕೆ ಪಾದಾರ್ಪಣೆ ಮಾಡುವ ಪೂಜ್ಯ ಶ್ರೀ ಶ್ರೀಗಳವರ ಬುದ್ಧಿಸ್ಥಿಮಿತವನ್ನು ಅವರ ವಯಸ್ಸು ಮಾಸಿಲ್ಲವೆಂಬುದು ವೈಜ್ಞಾನಿಕ ಸತ್ಯ, ಸಮಾಜದ ಪುಣ್ಯ ಕಾಯಕ ದಾಸೋಹದ ತನ್ಮಯಗೊಳಿಸಿದ ಅಪೂರ್ವ ಶಿವಯೋಗ ಮೇಲಾಗಿ 'ಮಧ್ಯವರ್ತಿಗಳ' ನುಡಿಗಳಿಗೆ ಕಿವಿಗೊಡುವ ಪ್ರವೃತ್ತಿ ಪೂಜ್ಯ ಶ್ರೀ ಶ್ರೀಗಳವರದಾಗಿದ್ದರೆ ನೂರು ವಿದ್ಯಾರ್ಥಿಗಳಿಗೆ ಆಶ್ರಯ ಕೊಟ್ಟಿದ್ದ ಶ್ರೀ ಮಠವನ್ನು ನಾಲ್ಕು ಸಾವಿರ ವಿದ್ಯಾರ್ಥಿಗಳಿಗೆ ಆಶ್ರಯ ಕೊಡುವಷ್ಟು ಬೃಹತ್ತಾಗಿ ಬೆಳೆಸಲಾಗುತ್ತಿದ್ದಿತೆ? ಎಂಬ ಆಲೋಚನೆ ನಮ್ಮದಾಗಬಾರದೆ ? ಚಿಂತನ ದಾರಿದ್ರ್ಯ ಬಡಿದಿದೆಯೇ ಎಷ್ಟು ನಿಷ್ಟುರವನ್ನಾದರೂ ಬಗಲಿಗೆ ಹಾಕಿಕೊಂಡು ಯಾವೆಲ್ಲ ಟೀಕೆಗಳನ್ನು ಸಹಿಸಿಕೊಂಡು ಸಮಾಜ ಜೀವನದ ಸ್ವಾಸ್ಥ್ಯಕ್ಕೆ ಹೋರಾಡುವ ಶ್ರೀ ಶ್ರೀಗಳವರಂಥ ವ್ಯಕ್ತಿಗಳು ಅಪರೂಪ.

ನಿತ್ಯ ಸಹಸ್ರಾರು ಹಸಿದ ಹೊಟ್ಟೆಗಳಿಗೆ ಅನ್ನನೀಡುತ್ತಿರುವ ಪೂಜ್ಯರ ಬಗ್ಗೆ ತಮ್ಮ ಉತ್ತರಾಧಿಕಾರಿಗಳಿಗೆ ಅಕ್ಕಿಯಲ್ಲಿ ಕಲ್ಲು ಬೆರಸಿ ಕೊಡುತ್ತಾರೆ, ಕಲ್ಯಾಣಿಯಲ್ಲಿ ಸ್ನಾನ ಮಾಡುವ ಸ್ಥಿತಿಗೆ ತಂದಿದ್ದಾರೆ, ಪ್ರಸಾದ ಪರಿಕರಣಗಳನ್ನು ಸರಿಯಾಗಿ ಪೂರೈಸುತ್ತಿಲ್ಲ ಎಂಬಂಥ ಅಬದ್ಧ ಹಸಿ ಸುಳ್ಳುಗಳ ಪ್ರಚಾರ ನಡೆಸಿರುವ ಪುಣ್ಯಾತ್ಮರು ತಮ್ಮ ಅಂತರಂಗವನ್ನೊಮ್ಮೆ ಏಕಾಂತದಲ್ಲಿ ಪ್ರಶ್ನಿಸಿಕೊಳ್ಳಲಿ ಎಂದು ವಿನಮ್ರವಾಗಿ ಮನವಿ ಮಾಡಿಕೊಳ್ಳ ಬಯಸುತ್ತೇವೆ. ಅಲ್ಲೂ ಉತ್ತರ ದೊರೆಯದೇ ಹೋದರೆ ಶ್ರೀ ಮಠಕ್ಕೆ ಬಂದು ಸತ್ಯವನ್ನು ತಿಳಿಯಲಿ ಎಂದಿಷ್ಟೇ ಹೇಳಲಿಚ್ಛಿಸುತ್ತೇವೆ.

ನಿವೃತ್ತ ಮಠಾಧ್ಯಕ್ಷರು, ಸನ್ಯಾಸಿಗೇಕೆ ಸಮಾಧಿ, ಎಂದೆಲ್ಲ ಭಾಷಣ ಮಾಡುವ ಪ್ರವೃತ್ತಿಯ ಹಿಂದಿರುವ 'ಮನಸ್ಸು' ಎಂಥದು ಎಂಬುದನ್ನರಿತ ವಿಚಾರವಂತ ಸುಸಂಸ್ಕೃತ ಜನತೆ ಯಾವುದು ದೊಡ್ಡದು, ಯಾವುದು ಸಣ್ಣದು ಎಂಬುದರ ವಿಮರ್ಶೆ ಮಾಡದಿರಲಾರರು. ಸವಕಲು ನಾಣ್ಯಗಳು ಚಲಾವಣೆಯಾಗಲು ಮಾಡುವ ಎಲ್ಲ ಹತಾಶ ಪ್ರಯತ್ನಗಳೂ ಪರಿಣಾಮದಲ್ಲಿ ಸೊನ್ನೆಯಾಗದಿರವು ಎಂಬ ಅರಿವು ಜನತೆಗಿದೆ ಎಂದಿಷ್ಟೆ ನಮ್ಮ ಭಾವನೆ.

---

ಅಕ್ಕ ಕೇಳವ್ವ, ಅಕ್ಕಯ್ಯ ನಾನೊಂದ ಕನಸ ಕಂಡೆ. ಅಕ್ಕಿಯುಡಕೆ ತೆಂಗಿನ ಕಾಯ ಕಂಡೆ. ಚಿಕ್ಕ ಚಿಕ್ಕ ಜಡೆಗಳ ಸುಲಿಪಲ್ಲ ಗೊರವನು ಬಿಕ್ಷಕ್ಕೆ ಬಂದುದ ಕಂಡೆನವ್ವ. ಮಿಕ್ಕು ಮೀರಿ ಹೋಹನ ಬೆಂಬತ್ತಿ ಕೈವಿಡಿದೆನು. ಚನ್ನಮಲ್ಲಿಕಾರ್ಜುನನ ಕಂಡು ಕಣ್ದೆರೆದೆನು. —ಮಹಾದೇವಿಅಕ್ಕ.

## ಪ್ರದಾಯ:

—ಜಿ. ರಾಮಣ್ಣ ನಾಯ್ಕ್, ಅಲೆಟ್ಟಿ.

ಬಸವನ ಹುಳು ತನ್ನ ಸುತ್ತ ಚಿಪ್ಪು ಬೆಳೆಸಿಕೊಳ್ಳುವಂತೆ ಸಮಾಜ, ದೇ ಉದ ನಂಬಿಕೆಗಳು, ಆಚಾರ ವಿಚಾರಗಳು, ಪ್ರವೃತ್ತಿಗಳು ಇವುಗಳ ಒಂದು ತಾವರಣವನ್ನು ತನ್ನ ಸುತ್ತಲೂ ನಿರ್ಮಿಸಿಕೊಳ್ಳುತ್ತದೆ. ಶಾಸ್ತ್ರಗಳು ಅನಂತ ಯು ಬೇಕಾದುದು ಮಹಾಸಮುದ್ರದಷ್ಟು. ಕಾಲವು ಸ್ವಲ್ಪ. ವಿಘ್ನಗಳು ಲೆಕ್ಕ ದಷ್ಟು. ಆದುದರಿಂದ ಬೇಕಾದಷ್ಟು ಮಾತ್ರ ಅಂದರೆ ಸಾರಭೂತವಾದುದನ್ನೇ ವು ತಿಳಿದುಕೊಳ್ಳಲು ಯತ್ನಿಸಬೇಕು. ಹಂಸವು ಹಾಲನ್ನು ಹೀರಿಕೊಂಡು ರನ್ನು ಬಿಟ್ಟು ಬಿಡುವಂತೆ ನಾವು ಸದಾ ಸಾರಭೂತವಾದುದನ್ನು ಸಂಗ್ರಹಿ ಕು. ಕನ್ನಡಿ, ಬಾಚಣಿಗೆ, ಕರಪತ್ರಗಳನ್ನು ಪ್ರಯಾಣ ಕಾಲದಲ್ಲಿ ಜೊತೆಗೆ ದುಕೊಂಡು ಹೋಗುವಂತೆ ನಮ್ಮ ಬಾಳ ಪಯಣದಲ್ಲಿ ಭಕ್ತಿ, ಜ್ಞಾನ, ವೈರಾ ಗಳು ಇರಬೇಕು ನಿಜ. ಆದರೆ ಇವುಗಳು ಸಂಪ್ರದಾಯದ ಬಲೆಯಲ್ಲಿ ಸಿಲುಕಿ ತ್ರವಾದ ಸಮಯವನ್ನು ಮತ್ತು ಕಷ್ಟದ ದುಡಿಮೆಯಿಂದ ಗಳಿಸಿದ ಹಣವನ್ನು ರ್ಥಗೊಳಿಸಬಾರದು. ಆದಾಯವನ್ನರಿಯದೆ ವೆಚ್ಚ ಮಾಡುವುದು, ಸತ್ವವನ್ನರಿ ದೆ ಜಗಳ ಮಾಡುವುದು, ಗುಣಗಳನ್ನರಿಯದೆ ಸ್ನೇಹ ಮಾಡುವುದು ಮತ್ತು ರ್ವಭಾವಿಯಾಗಿ ಆಲೋಚಿಸದೆ ಕೆಲಸ ಮಾಡುವುದು ವ್ಯರ್ಥವೆಂದು ಬಲ್ಲವರ ಪ್ರಾಯ.

ಕೆಲವು ಸಮಯದ ಹಿಂದೆ ಕೊಡಗಿನ ಕಾಫಿ ತೋಟದಲ್ಲಿ ಕೂಲಿಯಾಗಿ ನ ನನ್ನ ನೆಂಟರ ಮದುವೆಗೆ ಹೋಗಬೇಕಾಗಿ ಬಂತು. ಮದುವೆಗೆ ನಾನು ಸಿದುದಕ್ಕಿಂತಲೂ ಹೆಚ್ಚು ಜನರಿದ್ದರು. ಮದುವೆ ಕಾರ್ಯಕ್ರಮ ಮುಗಿದ ಲೆ ಊಟದ ಸಂದರ್ಭದಲ್ಲಿ ನನಗೆ ಬಹಳ ಆಶ್ಚರ್ಯವಾಯಿತು. ಅಲ್ಲಿನ ಪದ್ಧ ಂತೆ ವಿಶೇಷ ಭಕ್ಷ್ಯ ಭೋಜನಗಳನ್ನು ಊಟಕ್ಕೆ ಕುಳಿತವರಿಗೆ ಯಥೇಚ್ಛ ಬಡಿಸಿದರು. ಕೂಲಿ ಕೆಲಸ ಮಾಡಿ ಜೀವನ ಮಾಡುವವರು ಇಷ್ಟೊಂದು ವುದಿಂದ ಮದುವೆ ಯಾಕೆ ಮಾಡಿದರೆಂದು ಕೇಳುವ ಕುತೂಹಲವುಂಟಾ ತು. ಅದರಂತೆ ಮದುವೆ ಮುಗಿಸಿ ಹೊರಡುವ ಸಂದರ್ಭದಲ್ಲಿ ನನ್ನ ಸಂಬಂಧಿ ಡನೆ "ಏನು ಇಷ್ಟೊಂದು ಭರ್ಜರಿಯಾಗಿ ಕಾರ್ಯಕ್ರಮ ಮಾಡಿರುವಿರಲ್ಲಾ".

ಎಂದು ಕೇಳಿದಾಗ ಅವರು ತನ್ನ ಅಸಹಾಯಕತೆಯನ್ನು ತೋಡಿಕೊಳ್ಳುತ್ತಾ "ಏನು ಮಾಡುವುದು, ಇವೆಲ್ಲ ಈ ಊರಿನ 'ಸಂಪ್ರದಾಯ ಆದರಂತೆ ನಾವು ನಡೆಯ ಬೇಕಾಯಿತು" ಎಂದು ದುಃಖದಲ್ಲಿಯೇ ಹೇಳಿದಾಗ "ಹಾಳು ಸಂಪ್ರದಾಯ" ಎಂದು ಮನಸ್ಸಿನಲ್ಲಿಯೇ ಅಂದುಕೊಂಡೆ ಸಂಪ್ರದಾಯದ ಸೋಗಿನಲ್ಲಿ ಸಾಲಮಾಡಿಯಾದರೂ ಯಥೇಚ್ಛವಾಗಿ ಹಣ ಖರ್ಚು ಮಾಡುತ್ತಿರುವರಲ್ಲಾ ಎಂದು ವ್ಯಸನವಾಯಿತು.

ಇನ್ನೊಂದು ದಿನ ನನ್ನ ಊರಿನಲ್ಲಿ ಅಂದರೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಗೆಳೆಯರೊಬ್ಬರ ಆಮಂತ್ರಣದ ಮೇರೆಗೆ ಒಂದು ದೇವಿ ಪೂಜೆಗೆ ಹೋಗಬೇಕಾಯಿತು. ಆಮಂತ್ರಣದಲ್ಲಿ ರಾತ್ರಿ ಹತ್ತು ಗಂಟೆಗೆ ಪೂಜೆ ಎಂದಿತ್ತು. ಪೂಜೆಯ ತಕ್ಷಣ ಊಟದ ವ್ಯವಸ್ಥೆ ಇದ್ದುದರಿಂದ ಖಾಲಿ ಹೊಟ್ಟೆಯಲ್ಲಿಯೇ ಹೋದೆ ಪೂಜೆಯೇನೋ ಹತ್ತು ಗಂಟೆಗೆ ಆರಂಭವಾಯಿತು. ಆದರೆ ಹನ್ನೆರಡು ಗಂಟೆಯಾದರೂ ಮುಗಿಯುವ ಲಕ್ಷಣ ಕಂಡು ಬರದಿದ್ದುದರಿಂದ ಪೂಜೆಯ ಸಮಯವನ್ನು ಹಿರಿಯವರೊಡನೆ ಕೇಳಿದೆ ಅದಕ್ಕವರು ಪೂಜೆ ಮುಗಿಯುವುದು ಬೆಳಗಿನ ಜಾವ ಐದು ಗಂಟೆಗೆಂದೂ ಊಟದ ವ್ಯವಸ್ಥೆ ಆರು ಗಂಟೆಗೆಂದೂ ಹೇಳಿದಾಗ ಚುರ್‌ಗುಟ್ಟುತ್ತಿದ್ದ ನನ್ನ ಹೊಟ್ಟೆಯ ಉಸಿರೇ ನಿಂತಂತಾಯಿತು. ಪೂಜೆಗೆ ಬಂದ ಹೆಚ್ಚಿನವರು ಗುಂಪು ಗುಂಪಾಗಿ ಕುಳಿತು ಇಸ್ಪೀಟು ಆಡುತ್ತಾ ಕಾಲ ಕಳೆಯುತ್ತಿದ್ದಾಗ ನಾನು ಅನ್ನ ದೇವರನ್ನು ನೆನೆಯುತ್ತಾ ಕೂರಬೇಕಾಯಿತು

ಸಂಪ್ರದಾಯದ ಹೆಸರಿನಲ್ಲಿ ನಡೆಯುವ ಯಾವುದೇ ಕಾರ್ಯಕ್ರಮವಾದರೂ ಚಿಕ್ಕದಾಗಿ ಚೊಕ್ಕವಾಗಿದ್ದರೆ ಉತ್ತಮ ಇದರಿಂದ ಕಾರ್ಯಕ್ರಮ ನಡೆಸುವವರಿಗೂ ಆಮಂತ್ರಿತರಿಗೂ ಕ್ಷೇಮ. ವೃಥಾ ಕಾಲಹರಣದಿಂದ ಯಾರಿಗೂ ಏನೂ ಪ್ರಯೋಜನವಿಲ್ಲ "ಬದುಕಿನ ಒಂದು ಕ್ಷಣ ಕೋಟಿ ಹೊನ್ನು ಕೊಟ್ಟರೂ ದೊರೆಯಲಾರದು" ಎಂಬ ಚಾಣಕ್ಯನ ಮಾತು ಪ್ರತಿಯೊಬ್ಬರಲ್ಲೂ ಮನೆ ಮಾಡಿದ್ದರೆ ಎಷ್ಟು ಚೆನ್ನ!

---

ಹಾಲು ತುಪ್ಪವ ನುಂಗಿ ಬೇರಾಗಬಲ್ಲುದೇ ? ಸೂರ್ಯಕಾಂತಿಯಲ್ಲಿದ್ದಗ್ನಿಯನ್ನಾರು ಭೇದಿಸಬಲ್ಲರು ? ಅಪಾರ ಮಹಿಮ ಚನ್ನಮಲ್ಲಿಕಾರ್ಜುನ ನೀನೆನ್ನೊಳಡಗಿರ್ದ ಪರಿಯ ಬೇರಿಲ್ಲದೆ ಕಂಡು ಕಣ್ದೆರೆದೆನು.

ಮೂಲಾಧಾರದ ಬೇರ ಮೆಟ್ಟಿ, ಭೂಮಂಡಲವನ್ನೇರಿದೆ. ಆಧಾರದ ಬೇರ ಹಿಡಿದು. ಐಕ್ಯದ ತುದಿಯನ್ನೇರಿದೆ ವೈರಾಗ್ಯದ ಸೋಪಾನದಿಂದ. ಶ್ರೀ ಪರ್ವತವನೇರಿದೆ. ಕೈವಿಡಿದುಕೊಳ್ಳಾ ಚನ್ನಮಲ್ಲಿಕಾರ್ಜುನಾ. —ಅಕ್ಕಮಹಾದೇವಿ.

# ಬಸವ ಪ್ರತಿಜ್ಞೆ

—ಟಿ. ಎಸ್. ಮಹದೇವಯ್ಯ.

"ಒಲ್ಲೆನಯ್ಯಾ ಒಲ್ಲೆನಯ್ಯಾ ನಿಮ್ಮವರಲ್ಲದವರ ಒಲ್ಲೆನಯ್ಯಾ ಜಗನೆಲ್ಲವರಿಯಲು ಒಲ್ಲೆನಯ್ಯಾ, ಒಲ್ಲೆನಯ್ಯಾ ನೀ ಮುನಿದರೆಮುನಿ ಕೂಡಲಸಂಗಮದೇವ, ನಿಮ್ಮಾಣೆ ನಿಮ್ಮ ಪ್ರಮಥರಾಣೆ."

ಮನುಷ್ಯನಿಗೆ ಮಾತಾಪಿತೃ ಸಂಬಂಧಗಳೂ ಇತರ ಪತ್ನಿ ಪುತ್ರ ಸಂಬಂಧಗಳೂ ಮೊದಲಾದ ಕರುಳು ಸಂಬಂಧಗಳು ಇದ್ದೇ ಇರುತ್ತವೆ. ಈ ಸಂಬಂಧಗಳು ಯಾವಾಗಲೂ ಮನುಷ್ಯನ ಆಧ್ಯಾತ್ಮಿಕ ಉನ್ನತಿಗೆ ಸಹಕಾರಿಯಾಗಿ ಪರಿಣಮಿಸಲಾರವು. ಸಾಧಾರಣವಾಗಿ ಅವು ಅವನ ಜೀವನದ ಉನ್ನತಿಗೆ ಅಡ್ಡಲಾಗಿಯೇ ಬರುವವು. ದೇವನ ಆರಾಧನೆಗೆ ಸಹಕಾರಿಯಾಗಿ ಪರಿಣಮಿಸದಿರುವಾಗ ಆತನು ಅವುಗಳನ್ನು ಕಿತ್ತು ಬಿಸಾಡುವನು. ಅದಕ್ಕೇ ಭಗವಾನ್ ಬುದ್ಧ ದೇವನು ಒಮ್ಮೆ ಈ ರೀತಿಯಾಗಿ ಹೇಳಿರುವನು. "ಮನುಷ್ಯನಿಗೆ ಆತನ ತಾಯಿ ತಂದೆ ಬಂಧುಗಳೇ ಮೊದಲಾದ ಹಿತ ಚಿಂತಕರು ಮಾಡುವ ಉಪಕಾರಕ್ಕಿಂತಲೂ ಸನ್ಮಾರ್ಗದಲ್ಲಿ ಗಮನಿಸುವ ಆತನ ಮನಸ್ಸಿನ ಉಪಕಾರವೇ ಅನರ್ಘ್ಯವಾದುದು". ಇದನ್ನು ಮೂಲವಾಗಿಟ್ಟುಕೊಂಡು ಬುದ್ಧದೇವನು ತನ್ನ ಕಾರುಣ್ಯದಲ್ಲಿಯೇ ಪತ್ನೀಪುತ್ರರನ್ನು ತ್ಯಜಿಸಿ ವನವಾಸಿಯಾಗಿ ಸತ್ಯ ಶೋಧನೆಗೆ ಹೊರಟನು.

ಪತ್ನೀ ಪುತ್ರರ ಒಲವು ಹೆಚ್ಚಾಗಿರುತ್ತದೆ. ಅದನ್ನು ಬಿಡುವುದು ಬಹಳ ಕಠಿನತರ. ಅದು ಆಕರ್ಷಣೀಯವಾದುದು ಈ ಒಲವಿನಿಂದ ಮನುಷ್ಯನು ನಿಮಿತ್ತ ಮಾತ್ರವಾದ ಯಂತ್ರದಂತೆ ವ್ಯವಹರಿಸಬೇಕಾಗುವುದು ಅಂತಹ ಸಂದರ್ಭದಲ್ಲಿ ಮನುಷ್ಯನು ಭಯಂಕರವಾದ ಕೃತ್ಯಗಳನ್ನೇ ಮಾಡಬೇಕಾಗುವುದು. ಒಲವಿನ ಬಲದಿಂದ ಅವನು ಮಾಡಿಯೇ ಬಿಡುವನು. ಅಂದ ಮೇಲೆ ತನುವಿನ ಮೇಲೆ ಮಮತೆ ಮಮಕಾರಗಳ ಸೆಳೆತಗಳು ಎಷ್ಟು ಬಲವಾಗಿರುವುವು ? ಈ ಕರುಳ ಸಂಬಂಧವು ಎಷ್ಟು ಬಲವಾಗಿರುವುದು. ಅದಕ್ಕಾಗಿಯೇ ಮಹಾ ಪುರುಷರು ಕರುಳ ಸಂಬಂಧಗಳನ್ನು ಕಿತ್ತು ಹಾಕಿ ಕರಣ ಸಂಬಂಧಗಳನ್ನು ಬೆಳೆಸುತ್ತಾರೆ. ಅಂತಃಕರಣಗಳನ್ನು ಮೀಟಿ ಮೀಟಿ ಎಲ್ಲರ ಹೃದಯಗಳೂ ಒಂದೇ ತಾನಿಗೆ ಕೂಡುವಂತೆ ಮಾಡುತ್ತಾರೆ. ಅದನ್ನೇ ಸ್ವಾಮಿ ರಾಮತೀರ್ಥರು ಹೀಗೆ ನುಡಿದಿರುವರು. 'ನಿಮ್ಮ ಸಂಸಾರಿಕ ಮನೆಗಿಂತ ನಿಮ್ಮ ಆತ್ಮರೂಪಿ ಮನೆಯು ಬಹಳ ಗಟ್ಟಿಯಾ

ದದ್ದು ಮತ್ತು ಬಹಳ ದಿವಸ ಇರುವಂಥದ್ದು. ಆದುದರಿಂದ ನೀವು ಸಂಸಾರಿಕ ಮನೆಯನ್ನು ಬಿಟ್ಟು ಆತ್ಮರೂಪಿ ಮನೆಯಲ್ಲಿಯೇ ವಾಸಿಸಿರಿ". ಇದನ್ನೇ ಎಲ್ಲ ಮಹಾತ್ಮರು ಆಚರಿಸಿರುವರು.

ಕೆರುಳ ಸಂಬಂಧವಿರುವಾಗ ಮನುಷ್ಯನು ಅವರಿಗಾಗಿ ಏನು ಬೇಕಾದರೂ ಮಾಡುವನು. ಆದರೇ ಅದನ್ನೇ ದೇವರಿಗಾಗಿ ಮಾಡಲರಿಯನು. ಇದನ್ನೆಲ್ಲ ಭಗವಾನ್ ರಾಮಕೃಷ್ಣ ಪರಮ ಹಂಸರು ಗಮನಿಸಿ ಹೀಗೆ ನುಡಿದಿರುವರು. "ಹೆಂಡತಿ ಮಕ್ಕಳ ದೆಸೆಯಿಂದ ಮನುಷ್ಯನು ತಂಬಿಗೆಗಟ್ಲೆ ಕಣ್ಣೀರು ಸುರಿಸುವನು. ಆದರೆ ದೇವರ ದೆಸೆಯಿಂದ ಯಾರಾದರೂ ಕಣ್ಣೀರಿಡುವರೋ? ಹಾಗೆ ಕಣ್ಣೀರು ಬಿಡುವವನಿಗೆ ದೇವರು ನಿಜವಾಗಿ ಕಾಣಿಸುವನು. ಯಾವನ ಹೃದಯವು ಪ್ರೇಮದಿಂದ ಶುದ್ಧವಾಗಿ ಅದರಿಂದಲೇ ದೇವನಿಗಾಗಿ ಕರಗಿ ನೀರಾಗಿ ಅವನ ಬಳಿಗೆ ಹರಿಯುತ್ತಿದೆಯೋ ಹಗಲಿರುಳು ಯಾವ ಹೃದಯವು ಅವನನ್ನು ಕಾಣಲು ಹಾತೊರೆಯುತ್ತಿದೆಯೋ ಅವನಿಗೆ ದೇವರು ಬೇಗನೆ ಕಾಣಿಸುವನು. ಬಸವೇಶ್ವರನು ಇದನ್ನು ಅನುಭವಿಸಿ ದೇವನಲ್ಲಿ ತನಗಿರುವ ಒಲ್ಮೆಯ ಬಲ್ಮೆಯಿಂದ ಈ ತ್ಯಾಗಮಂತ್ರವನ್ನು ಹಾಡಿರುತ್ತಾನೆ.

---

ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹುತ, ವಿಶುದ್ಧಿ, ಅಜ್ಞೆಯ ಮಾತ ಹೇಳ್ಕಿದೊಡೇನು ? ಕೇಳಿದೊಡೇನು ? ತನ್ನಲ್ಲಿದ್ದುದ ತಾನರಿಯದನ್ನಕ್ಕ ಹೇಳಿದೊಡೇನು, ಕೇಳಿದೊಡೇನು? ಉನನ್ಮಿಯ ರಭಸದ ಪವನದಲ್ಲಿದ್ದು ಚನ್ನಮಲ್ಲಿಕಾರ್ಜುನಯ್ಯನ ಬೇಧಿಸವನ್ನಕ್ಕರ ?

ಪಂಚೇಂದ್ರಿಯದ ಉರುವಣೆಯುಹುದು. ಮದದ ಭರದ ಜವ್ವನದೊಡಲು ವೃಥಾ ಹೋಯಿತ್ತಲ್ಲಾ ! ತುಂಬಿ ಪರಿಮಳವನೆ ಕೊಂಡು ಲಂಬಿಸುವ ತೆರನಂತೆ, ಇನ್ನೆಂದಿಗೆ ಒಳಕೊಂಬೆಯೋ ಅಯ್ಯ ಚನ್ನಮಲ್ಲಿಕಾರ್ಜುನಾ.

ನಾನು ನಿನಗೊಲಿದೆ. ನೀನು ಎನಗೊಲಿದೆ. ನೀನೆನ್ನ ನಗಲದಿಪ್ಪೆ. ನಾ ನಿನ್ನನಗಲದಿಪ್ಪೆನಯ್ಯ. ನಿನಗೆ ನನಗೆ ಬೇರೊಂದುಠಾವುಂಟೆ? ನೀನು ಕರುಣಿ ಎಂಬುದ ನಾನು ಬಲ್ಲೆನು. ನೀನಿರಿಸಿದ ಗತಿಯೊಳಗೆ ಇಪ್ಪವಳಾನಯ್ಯ. ನೀನೆ ಬಲ್ಲೆ ಚನ್ನಮಲ್ಲಿಕಾರ್ಜುನಾ.

—ಮಹಾದೇವಿಯಕ್ಕ

ಭಾರತ ಸರ್ಕಾರದ ವಾರ್ತಾ ಶಾಖೆ
ಬೆಂಗಳೂರು

ವಿಶೇಷ ಲೇಖನ

# ವಾಯು ಸೇನೆಯ ತಾಂತ್ರಿಕ ಸಾರಿಗೆ ತರಬೇತಿ ಸಂಸ್ಥೆ

ಆಕಾಶದಲ್ಲಿ ಹಾರಾಡುವ ವಿ ಮಾ ನ ಗ ಳು, ನೆಲದಲ್ಲೇ ಸಂಚರಿಸುವ ಮೋಟಾರ್ ವಾಹನಗಳ ವೇಗದಲ್ಲಿ ಅಜಗಜಾಂತರ ವ್ಯತ್ಯಾಸ ಆದರೂ ಅವುಗಳು ತಮ್ಮ ಕಾರ್ಯ ಕ್ಷೇತ್ರದಲ್ಲಿ ಯಶಸ್ಸನ್ನು ಗಳಿಸಲು ಒಂದನ್ನೊಂದು ಅವಲಂಬಿಸಬೇಕು. ಭಾರತೀಯ ವಿಮಾನ ಬಲದ ನೆಲೆಯಲ್ಲಿನ ಕಾರ್ಯ ಈ ದಿಶೆಯಲ್ಲೊಂದು ಉತ್ತಮ ನಿದರ್ಶನ. ಭಾರತೀಯ ವಿಮಾನ ಬಲಕ್ಕೆ ಪ್ರತ್ಯೇಕವಾಗಿ ಮೋಟಾರ್ ಚಾಲಕರು ಹಾಗೂ ಫಿಟ್ಟರ್‌ಗಳಿಗೆ ತರಬೇತಿ ನೀಡುವ ವಿಶೇಷ ಕೇಂದ್ರವೊಂದು ಮದರಾಸು ಸಮೀಪದ ಆವಡಿಯಲ್ಲಿದೆ. ವಿಮಾನ ಬಲದ ಚಾಲಕರು ಹಾಗೂ ಬಿಡಿ ಭಾಗ ಗಳನ್ನು ಜೋಡಿಸುವ, ದುರಸ್ತಿ ಮಾಡಲು ವಿಶೇಷ ಜ್ಞಾನ ಅತ್ಯಗತ್ಯ. ಎಂದೇ ಈ ಸಂಸ್ಥೆಯ ಸ್ಥಾಪನೆ.

ಯಾಂತ್ರಿಕ ಸಾರಿಗೆ ತರಬೇತಿ ಸಂಸ್ಥೆಯನ್ನು ಮ ದ ರಾ ಸಿ ನ ಆವಡಿಯಲ್ಲಿ 1978 ರಲ್ಲಿ ಸ್ಥಾಪಿತವಾಯಿತು. ರಾಷ್ಟ್ರದ ಅತೀ ಮುಖ್ಯವಾದ ಸಂಸ್ಥೆಗಳೊಂದಾದ ಈ ಕೇಂದ್ರದಲ್ಲಿ ಪ್ರತಿ ಆರು ತಿಂಗಳಿಗೊಮ್ಮೆ ತರಬೇತಿ ಶಿಬಿರವನ್ನು ನಡೆಸಲಾಗುತ್ತಿದ್ದು 36 ರಿಂದ 38 ವಾರಗಳಲ್ಲಿ ಮೋಟಾರ್ ಚಾಲಕರಿಗೆ ಹಾಗೂ ಮೆಕ್ಯಾನಿಕ್‌ಗಳಿಗೆ ಉತ್ತಮ ತರಬೇತಿ ಲಭ್ಯವಾಗುತ್ತಿದೆ. ಪ್ರತಿ ಶಿಬಿರದಲ್ಲಿ 800 ರಿಂದ 1900 ಮಂದಿ ಅಭ್ಯರ್ಥಿಗಳಿಗೆ ಈ ಸೌಲಭ್ಯ ದೊರೆಯುವುದು.

ಕಡಿಮೆ ಅವಧಿಯಲ್ಲಿ ಉತ್ತಮ ತರಬೇತಿ ಕೇಂದ್ರದ ಮಹತ್ವ ಮೋಟಾರ್ ತಂತ್ರಜ್ಞರಿಗೆ ಜೀಪ್, ಮೋಟಾರ್, ಲಾರಿ, ಮೋಟಾರ್ ಸೈಕಲ್ ಮುಂತಾದ ವಿವಿಧ ವಾಹನಗಳ ಯಾಂತ್ರಿಕ ವಿಷಯಗಳಲ್ಲಿ ತರಬೇತಿ ನೀಡಲಾಗುವುದಲ್ಲದೆ ಚಾಲಕ ರಿಗೆ ವಿವಿಧ ರಸ್ತೆಗಳಲ್ಲಿ, ಕಡಿದಾದ, ಇಕ್ಕಟ್ಟು ಪ್ರದೇಶಗಳು ಹಾಗೂ ಅತ್ಯಂತ ಹೆಚ್ಚು ಸಂಚಾರವಿರುವ ಪ್ರದೇಶಗಳಲ್ಲಿ ಓಡಿಸುವ ಬಗ್ಗೆ ತರಬೇತಿ ನೀಡಲಾಗುವುದು ತರ ಗತಿಯಲ್ಲಿ ಜೋಡಿಸುವುದು ಹಾಗು ಮಾಡಿ ತೋರಿಸುವುದರ ಮೂಲಕ ತರಬೇತಿ ಯನ್ನು ನೀಡಲಾಗುವುದು. ಮೋಟಾರ್ ತಂತ್ರಜ್ಞರು ಒಂದು ವರ್ಷದವರೆಗೆ ತರ

ಬೇತಿ ಪಡೆದ ನಂತರದಲ್ಲಿ ಅವರಿಗೆ ವಾಹನಗಳನ್ನು ಪೂರ್ಣವಾಗಿದುರಸ್ತಿ ಮಾಡು ವದು, ಕೂಲಂಕುಶವಾಗಿ ಪರೀಕ್ಷಿಸುವುದಕ್ಕೆ ಸಂಬಂಧಿಸಿದ ತರಬೇತಿಯನ್ನು ನೀಡ ಲಾಗುವದು. ಸುಮಾರು 21 ರಿಂದ 30 ವರ್ಷಗಳ ಸೇವೆ ಸಲ್ಲಿಸಿದ ಶ್ರೇಷ್ಠ ಅಭ್ಯರ್ಥಿ ಗಳಿಗೆ ವಾರೆಂಟ್ ಅಧಿಕಾರಿಗಳಾಗಿ ಬಡ್ತಿ ದೊರೆಯುವ ಅವಕಾಶವಿದೆ. ಭಾರತೀಯ ವಾಯುಸೇನೆ ಅಧಿಕಾರಿಗಳಾಗಿ, ಸೇರಿಸಿಕೊಳ್ಳಲು ಕೆಲವು ಅರ್ಹ ವ್ಯಕ್ತಿಗಳಿಗೆ ಅವಕಾಶ ನೀಡಲಾಗುವುದು. ತರಬೇತಿ ಅವಧಿಯಲ್ಲಿ ಕ್ರೀಡೆಗಳು, ಹಾಗೂ ದೇಹದ ಬಲ ಹೆಚ್ಚಿಸಿಕೊಳ್ಳಲು ನೆರವಾಗುವ ವಿವಿಧ ಕಸರತ್ತುಗಳಿಗೆ ಹೆಚ್ಚಿನ ಆಸ್ಥೆ ನೀಡಲಾಗುವದು.

ತಾಂತ್ರಿಕ ಮೋಟಾರ್ ತರಬೇತಿ ಕೇಂದ್ರದಲ್ಲಿ ಸೇರ ಬಯಸುವ ಹತ್ತನೇ ಅಥವಾ ತತ್ಸಮಾನ ತರಗತಿಯಲ್ಲಿ ತೇರ್ಗಡೆಯಾಗಿರಬೇಕು. ತರಬೇತಿ ನಂತರ ಉದ್ಯೋಗ, ಕೈತುಂಬ ಸಂಬಳ. ಸುಗಮ ಜೀವನಕ್ಕೆ ಸಾಂದಿ

ಭಾರತೀಯ ವಾಯುಸೇನೆ ಇದೇ 1986 ಅಕ್ಟೋಬರ್ ೮ರ ವೇಳೆಗೆ 54 ವರ್ಷಗಳ ಸತತ ಸಾರ್ಥಕ ಸೇವೆಯನ್ನು ಸಲ್ಲಿಸಿದೆ. ಭಾರತೀಯ ವಾಯುಸೇನೆಯ ವಿಮಾನಗಳು ಸಾಕಷ್ಟು ಬಲಗೊಂಡಿದೆ. ಹೊಸ ಹೊಸ ತಂತ್ರಗಳನ್ನು ಬಳಸಲಾಗು ತ್ತಿದೆ. ಇಡೀ ವಿಮಾನ ಬಲವನ್ನೇ ನವೀಕರಿಸಲಾಗಿದೆ ಕಂಪ್ಯೂಟರ್ ಅಳವಡಿಕೆ ಯಿಂದಾಗಿ ಉತ್ತಮ ಸೇವೆಗೆ ಅವಕಾಶ ದೊರೆತಿದೆ. ●

---

ಇಂದ್ರ ನೀಲಗಿರಿಗಳನ್ನೇರಿಕೊಂಡು, ಚಂದ್ರ ಶಿಲೆಗಳ ಮೆಟ್ಟಿಕೊಂಡು, ಕೊಂಬ ಬಾರಿಸುತ, ಹರನೇ ಎನ್ನ ಕುಂಭಕುಚದ ಮೇಲೆ ನಿಮ್ಮನ್ನೈದಿಪ್ಪೆ ಕೊಂಬೆ ನಯ್ಯ ! ಅಂಗ ಭಂಗ ಮನ ಭಂಗವಳಿದು, ನಿಮ್ಮನೆಂದಿಗೊಮ್ಮೆ ನೆರೆವೆನೋ ಚನ್ನ ಮಲ್ಲಿಕಾರ್ಜುನಾ ?

ತಾನು ದುಂಡುಮುಂಡಲಕ್ಕೆ ಹೋದನೆಂದೊಡೆ, ನಾನು ಸುಮ್ಮನಿಹೆನಲ್ಲದೆ, ತಾನೆನ್ನ ಕೈಯೊಳಗಿರ್ದು ಎನ್ನ ಮನದೊಳಗಿರ್ದು, ಎನ್ನ ಕೂಡದಿರ್ದೊಡೆ, ನಾನೆಂತು ಸೈರಿಸುವೆನವ್ವಾ ! ನೆನಹೆಂಬ ಕುಂಟಣಿ ಚನ್ನಮಲ್ಲಿಕಾರ್ಜುನನ ನೆರೆಯ ದಿರ್ದೊಡೆ, ಆನೇವೆ ಸಖಿಯೇ?

—ಮಹಾದೇವಿಯಕ್ಕ

ಸಿದ್ಧಗಂಗಾ

## ಚಟಚಟ್ಟೇಶ್ವರ ದೇವಾಲಯ

ಶ್ರೀಮತಿ ಎಸ್. ಪ್ರಭಾಮಣಿ, ನಂ 302, ಸಿ ಬ್ಲಾಕ್, ಪೋಲಿಸ್ ಕ್ವಾಟ್ರಸ್, ಜಲಪುರಿ
ಮೈಸೂರು-10

ಕನ್ನಡ ನಾಡಿನ ಶಿಲ್ಪ ಸೌಂದರ್ಯ ಜಗತ್ಪ್ರಸಿದ್ಧವಾಗಲು ಹೊಯ್ಸಳ ಅರಸರು ನೀಡಿರುವ ಕಾಣಿಕೆ ಅತ್ಯದ್ಭುತ. ಹೊಯ್ಸಳ ಶಿಲ್ಪದ ಪರಮೋತ್ಕೃಷ್ಟತೆಗೆ ಅರಸರುಗಳ ಜತೆಗೆ ಅವರ ಸಾಮಂತರು, ದಣಾಯಕರು ನೀಡಿರುವ ಕಾಣಿಕೆ ಚಿರಸ್ಮರಣೀಯ. ಭಗವತ್ಸೇವೆಗೋಸ್ಕರವಾಗಿ ತನುಮನ ಧನಗಳನ್ನು ತ್ರಿಕರಣಪೂರ್ವಕವಾಗಿ ವಿನಿಯೋಗಿಸಿ ಕೃತಾರ್ಥರಾಗಿದ್ದಾರೆ. ಅವರ ದೇಹ ನಶಿಸಿ ಶತಮಾನಗಳು ಉರುಳಿದರೂ ಇಂದಿನ ಜನಾಂಗಕ್ಕೆ ಮಹತ್ತರ ಕಾಣಿಕೆ ನೀಡಿದ್ದಾರೆ ಎಂಬುದನ್ನು ಇಂದು ಕಣ್ಣಾರೆ ಕಂಡು ಅವರಿಗೆ ನಮ್ಮ ಧನ್ಯವಾದ ಅರ್ಪಿಸಬೇಕಾದುದು ನಮ್ಮ ಕರ್ತವ್ಯವಾಗಿದೆ.

ಐತಿಹಾಸಿಕ ದೃಷ್ಟಿಯಿಂದ ಪೌರಾಣಿಕ ಮಹತ್ವದಿಂದ, ಶಿಲ್ಪ ಸೊಬಗಿನಿಂದ ಪ್ರೇಕ್ಷಕನ ಮನತಣಿಸುವ ಹಲವಾರು ಕ್ಷೇತ್ರಗಳು ಇಂದು ಕನ್ನಡ ನಾಡಿನಲ್ಲಿ ನಾವು ಕಾಣಬಹುದಾಗಿದೆ. ಈಗ ಚಟಚಟ್ಟಹಳ್ಳಿಯು ಕುಗ್ರಾಮವಾಗಿದ್ದರೂ ಹಿಂದೆ ಪ್ರಖ್ಯಾತಿ ಪಡೆದ ಸ್ಥಳವಾಗಿದ್ದಿತು. ಹಳೇ ಬೀಡಿಗೆ 3 ಮೈಲಿ ದೂರದಲ್ಲಿ ಹಳೇಬೀಡು-ಜಾವಗಲ್ ರಸ್ತೆಯಲ್ಲಿ ರಸ್ತೆಯ ದಕ್ಷಿಣಕ್ಕೆ ಚಟಚಟ ಹಳ್ಳಿ ಗ್ರಾಮವಿದೆ. ಹೊಯಿಸಳ 2ನೇ ವೀರಬಲ್ಲಾಳನ ಕಾಲದಲ್ಲಿ ಕ್ರಿ. ಶ, 1200ರಲ್ಲಿ ಚಟ್ಟದಂಡನಾಯಕನು ಇಲ್ಲಿ ಚಟಚಟ್ಟೇಶ್ವರ ದೇವಾಲಯವನ್ನು ನಿರ್ಮಿಸಿರುವುದಾಗಿ ಹೇಳಿದೆ. ಸ್ವಾಮಿಯ ಹೆಸರಿನಿಂದ ಊರಿಗೆ ಚಟಚಟ್ಟ ಹಳ್ಳಿ ಎಂದು ಕರೆಯಲ್ಪಟ್ಟಿದೆ. ಊರಿನ ಅಂಚಿನಲ್ಲಿ ದಕ್ಷಿಣಾಭಿಮುಖವಾಗಿ ಸರ್ವಧರ್ಮ ಸಮನ್ವಯ ತತ್ವವನ್ನೇ ಪ್ರತಿಪಾದಿಸುವ ಶಿವಾಲಯವಿದೆ ಪ್ರಾಕಾರವೆಲ್ಲಾ ನಾಶವಾಗಿ ಹೋಗಿದೆ. ಇದು ತ್ರಿಕೂಟಾಚಲವೆನಿಸಿಕೊಂಡಿದ್ದು 2 ಗೋಪುರಗಳು ನಾಶವಾಗಿ ಒಂದು ಗೋಪುರ ಮಾತ್ರ ಕಾಣಬರುತ್ತದೆ.

ಮುಖಮಂಟಪವನ್ನೇ ಜಗುಲಿಯ ಮೇಲಿರುವ 4 ದುಂಡು ಕಂಬಗಳು ಹೊತ್ತುಕೊಂಡಿವೆ ನವರಂಗದಲ್ಲಿ 9 ಭುವನೇಶ್ವರಿಗಳು ಇವೆ ಭುವನೇಶ್ವರಿಗಳಲ್ಲಿ ಅಷ್ಟದಿಕ್ಪಾಲಕರ ಚಿತ್ರವನ್ನು ಕಮಲದ ಮೊಗ್ಗುಗಳನ್ನು ಕೆತ್ತಿದೆ. ಗರ್ಭಗುಡಿಯಲ್ಲಿ

ಪ್ರಧಾನ ದೇವತೆ ಚಟಚಟ್ಟೇಶ್ವರ ಸ್ವಾಮಿ ಲಿಂಗ ರಾರಾಜಿಸುತ್ತಿದೆ ಮುಖ್ಯದೇವತೆಯ ಎಡಬಲಗಳಲ್ಲಿ ಮಹಾ ವಿಷ್ಣು ಹಾಗೂ ಸೂರ್ಯ ದೇವನ ಮೂರ್ತಿಗಳಿವೆ. ನವರಂಗವು ಅರಸೀಕೆರೆಯ ಚಂದ್ರಮೌಳೇಶ್ವರ ದೇವಾಲಯದಂತೆಯೇ ಇದೆ

ಗೋಪುರದಲ್ಲಿ ಮಹಾವಿಷ್ಣುವಿನ ಕೆಲವು ಚಿತ್ರಗಳನ್ನು ಕೆತ್ತಿದೆ.

ಚಟಚಟ್ಟೇಶ್ವರ ದೇವಾಲಯ ಹಾಳು ಬಿದ್ದಿರುವುದು ನೋಡಿದಾಗ ನಮ್ಮ ಸರ್ಕಾರ ಹಾಗೂ ಗ್ರಾಮದ ಜನತೆ ಹಿಂದಿನ ಕೊಡುಗೆಯನ್ನು ಹೇಗೆ ಉಪಯೋಗಿಸುತ್ತಿದ್ದಾರೆಂಬ ಅಂಶ ಅರಿವಾಗುತ್ತದೆ.



ನಿತ್ಯವೆನ್ನ ಮನೆಗೆ ನಡೆದು ಬಂದಿತ್ತು. ಮುಕ್ತಿ ಎನ್ನ ಮನೆಗೆ ನಡೆದು ಬಂದಿತ್ತು; ಜಯ ಜಯ ಗುರುವೇ, ನಮೋ ಪರಮ ಗುರುವೇ, ನಮೋ ನಮೋ, ಚನ್ನಮಲ್ಲಿಕಾರ್ಜುನನ ತಂದೆನಗೆ ತೋರಿಕೊಟ್ಟ ಗುರುವೇ ನಮೋ ನಮೋ.

—ಅಕ್ಕಮಹಾದೇವಿ

# ಬಸವರಸರ ಲೀಲೆಗಳು - 4

—ಹೆಚ್. ಜಿ. ರಾಧಾದೇವಿ.

ನಂ. 12/1 71, ಗಂಜ್ ರಸ್ತೆ, ರಾಯಚೂರು 584101

## ಉಪನಯನ:—

ಹೀಗೆ ಕಾಲ ಚಕ್ರ ಉರುಳಿ ಬಸವಣ್ಣನಿಗೆ ಏಳು ವರ್ಷ ತುಂಬಿತು. ಮನೆಯಲ್ಲಿ ತಂದೆ ತಾಯಿ ಉಪನಯನಕ್ಕೆ ಅಣಿಮಾಡಿದರು.

ವಿಪ್ರರನ್ನು ಕರೆಸಿ ಮನೆಗೆ ಸುವ್ವಲಾಲಿ
ಮಂತ್ರೋಕ್ತ ದೀಕ್ಷೆ ಕೊಡಿಸಲು ಸುವ್ವಲಾಲಿ
ಮತ್ತೆ ಓದನು ಪೇಳಲು ಸುವ್ವಲಾಲಿ
ಭಕ್ತ ಬಸವ ಒಲ್ಲೆಂದನು ಸುವ್ವಲಾಲಿ

ಮನೆ ತುಂಬಾ ನೆಂಟರಿಷ್ಟರು ತುಂಬಿದ್ದಾರೆ. ಆಳು ಮಾರುದ್ದಕ್ಕೂ ಚಪ್ಪರ ಹಾಕಿದ್ದಾರೆ.

ಏಳು ದಾರಿಯುದ್ದಕ್ಕೂ ಸುವ್ವಲಾಲಿ
ಬಾಳೆ ಚಪ್ಪರ ಹಾಕಿದರು ಸುವ್ವಲಾಲಿ
ಹಾದಿ ಬೀದಿಯುದ್ದಕ್ಕೂ ಸುವ್ವಲಾಲಿ
ಹಸಿರು ಚಪ್ಪರ ಹಾಕಿದರು ಸುವ್ವಲಾಲಿ

ಊರೂರಿಂದ ಬಂದ ಜನರಿಗೆ ಅನ್ನ ಸಂತರ್ಪಣೆ ಅರವಟ್ಟಿಗೆ ಕಟ್ಟಿ ಪಾನಕ, ನೀರು ಮಜ್ಜಿಗೆ ನೀಡುತ್ತಿದ್ದಾರೆ. ಬಾಲ ಬಸವನಿಗೆ ಅಲಂಕಾರ ಮಾಡುತ್ತಿದ್ದಾರೆ.

ಹಳದಿ ಪಂಚೆ ಉಡಿಸಿದಾರೆ ಸುವ್ವಲಾಲಿ
ಎಳೆಯ ಶಲ್ಯ ಹೊದಿಸಿದಾರೆ ಸುವ್ವಲಾಲಿ
ಎಳೆಯ ದಾರ ಕಟ್ಟುವಾಗ ಸುವ್ವಲಾಲಿ
ಮುಳಿದು ಒಲ್ಲೆಂದ ಬಸವ ಸುವ್ವಲಾಲಿ

ದಾರವನ್ನು ಕಿತ್ತೆಸೆದು ಬಸವಣ್ಣ ನೆರೆದ ಜನ ವೃಂದಕ್ಕೆ ಒಂದು ಸವಾಲು ಹಾಕುತ್ತಾರೆ.

ಬಾರದಿಂದ ಕಟ್ಟಿದರೆ ಸುವ್ವಲಾಲಿ
ಮೋಕ್ಷದಾವರ ತೆರೆಯುವುದೆ ಸುವ್ವಲಾಲಿ
ಹೃದಯದಾಧಾರದಿಂದ ಸುವ್ವಲಾಲಿ
ಜಗದೊಡೆಯ ಶಿವನ ಭಜಿಪೆ ಸುವ್ವಲಾಲಿ

ತಂದೆ ತಾಯಿ, ಹಿರಿಯರು, ಗುರುಗಳು ಹೇಳಿದಂತೆ ಕೇಳಬೇಕೆಂಬ ಒತ್ತಾಯ ಬಲವಾದಾಗ ಬಸವಣ್ಣ ಪ್ರತಿಭಟಿಸಿ

ಎನ್ನ ತಂದೆ ಶಿವನು ಎಂಬೆ ಸುವ್ವಲಾಲಿ
ಎನ್ನ ತಾಯಿ ಶಿವನು ಎಂಬೆ ಸುವ್ವಲಾಲಿ
ಎನ್ನ ಗುರುದೈವ ಸರ್ವಸ್ವಶಿವನು ಸುವ್ವಲಾಲಿ
ಇನ್ನು ಲೋಕದ ಸೆರೆಯ ಒಲ್ಲೆ ಸುವ್ವಲಾಲಿ

ಈ ತಂದೆ ತಾಯಿಊ, ಲೋಕದ ಬಂಧನ ಒಲ್ಲೆ ಎಂದು ಹಠಾ ಹಿಡಿದು ಮನೆ ತೊರೆದು ಹೊರಟು ಬಿಡುತ್ತಾನೆ.

ಹಾದಿಗೊಂದು ಹೂವು ಚೆಲ್ಲಿ ಸುವ್ವಲಾಲಿ
ಊರ ತೊರೆದು ಹೊರಟ ಬಸವ ಸುವ್ವಲಾಲಿ
ಬೀದಿಗೊಂದು ಹೂವು ಚೆಲ್ಲಿ ಸುವ್ವಲಾಲಿ
ಊರ ತೊರೆದು ಹೊರಟ ಬಸವ ಸುವ್ವಲಾಲಿ

ತಾಯಿ ಮಾದಲಾಂಬಿಕೆ ನಂದಿಕೇಶ್ವರನ ಗುಡಿಯ ಬಳಿ ಬಂದು ಬಿಕ್ಕಿ ಬಿಕ್ಕಿ ಅಳುತ್ತಾಳೆ. ಆಗ ಒಂದು ಪವಾಡ ನಡೆಯುತ್ತದೆ,

ಶಿವನ ಲಿಂಗದಿಂದ ಬೆಳಕು ಸುವ್ವಲಾಲಿ
ಹೊಳೆದು ಉಜ್ವಲವಾಯ್ತು ಸುವ್ವಲಾಲಿ
ಬೆಳಗಿನಲ್ಲಿ ಬೆಳಕು ಸೇರಿ ಸುವ್ವಲಾಲಿ
ಶಿವ-ಬಸವನಪ್ಪಿದಾನೆ ಸುವ್ವಲಾಲಿ

ಶಿವಲಿಂಗದಲ್ಲಿ ಬಸವಣ್ಣ ಸೇರಿದಂತೆ ಲಿಂಗದೆದುರು ಆದ ಈ ವಿಚಿತ್ರ ಕಂಡು ಮಾದಲಾಂಬಿಕೆ ಹೊಯ್ದಾಡುತ್ತಾ

ಹತ್ತು ವರ್ಷದ ತವಕೆ ಸುವ್ವಲಾಲಿ
ಕೊಟ್ಟೆ ಬಾಲ ಬಸವನ್ನ ಸುವ್ವಲಾಲಿ
ಮತ್ತೆ ನಿನ್ನ ಹೊಳಹಿನಲ್ಲಿ ಸುವ್ವಲಾಲಿ
ಭಕ್ತನಾಗಿ ಕೊಂಡೆ ಶಿವನೆ ಸುವ್ವಲಾಲಿ

ಅವಳ ಹೊಯ್ದಾಟಕ್ಕೆ ಶಿವಲಿಂಗದಿಂದ ಮೃದು ಮಧುರ ಉತ್ತರ ಬರುತ್ತದೆ. ಚಿನ್ನದ ಗೆಜ್ಜೆಯ ಉಲಿತದಂತೆ ದೇವನ ಮಂದಹಾಸ.

ಜಗದ ಉದ್ಧಾರಕ್ಕೆ ಸುವ್ವಲಾಲಿ
ಬಸವ ನನ್ನ ತೊರೆದು ಬಂದ ಸುವ್ವಲಾಲಿ
ಹೂವ್ವ ತೊರೆದ ಪರಿಮಳವು ಸುವ್ವಲಾಲಿ
ಹೂವು ಕೂಡಿದಂತೆ ಬಂದ ಸುವ್ವಲಾಲಿ

ಹೂವೂ ಪರಿಮಳದಂತೆ, ನನ್ನ ಬಸವನ ಸಂಬಂಧ, ಜಗದ ಉದ್ಧಾರ ಮಾಡುತ್ತೇನೆಂದು ತನ್ನನ್ನು ತೊರೆದು ಬಂದ, ಈಗ ಮತ್ತೆ ಜಗತೊರೆದು ಹೂವು ಪರಿಮಳ ಕೂಡಿದಂತೆ ನನ್ನಲ್ಲಿ ಐಕ್ಯನಾಗಲು ಬರುತ್ತಿದ್ದಾನೆ ಆದರೆ........?

ಬಾಲ ಬಸವನ್ನ ನಾನು ಸುವ್ವಲಾಲಿ
ಭಕ್ತನಾಗಿ ಕೊಂಬೆನು ಸುವ್ವಲಾಲಿ
ಶೀಲವಂತ ಭಕ್ತನಾಗಿ ಸುವ್ವಲಾಲಿ
ಜಗದ ಖ್ಯಾತನಾಗುವ ಸುವ್ವಲಾಲಿ

ಆದರೆ ನಾವು ಉದ್ಧಾರವಾಗುವ ಬಗೆ ಹೇಗೆಂದು ಮೂದಲಾಂಬಿಕೆ ಶಿವನಿಗೆ ಸ್ತೋತ್ರ ಮಾಡುತ್ತಾಳೆ. ನಂದಿಕೇಶ್ವರ ಅಭಯ ನೀಡಿ ........"ನಿನ್ನಿಂದ ಏಳು ತಲೆಮಾರು ಪಿತೃಗಳು ಶಿವಸಾಯುಜ್ಯ ಹೊಂದುವರು" ಎಂದು ವರ ನೀಡುತ್ತಾನೆ.

ಇತ್ತ ಬಸವಣ್ಣ ಭವದ ಬಂಧನ ತೊರೆದು ಹೊರಟು ಬಿಡುತ್ತಾನೆ.

ಎಡಕೆ ಏಳುಹೆಜ್ಜೆ ನಡೆದು ಸುವ್ವಲಾಲಿ
ಬಲಕೆ ತಿರುಗಿದ ಬಸವ ಸುವ್ವಲಾಲಿ
ನಡೆದು ಮುಂದೆ ಶಿವನ ನೆನೆದು ಸುವ್ವಲಾಲಿ
ಕೂಡಲ ಸಂಗಮ ಸೇರ್ದನು ಸುವ್ವಲಾಲಿ

ಕೃಷ್ಣ ಮಲಪ್ರಭ ನದಿಗಳು ಒಂದು ಗೂಡುವ ಪುಣ್ಯಕ್ಷೇತ್ರವದು. ಆ ಪುಣ್ಯ ಸಂಗಮದಲ್ಲಿ ಸ್ನಾನ ಮಾಡುತ್ತಾನೆ.

ಜಲವ ಕಂಡು ಶಿವನ ನೆನದು ಸುವ್ವಲಾಲಿ
ಮುಳುಗಿ ಮೇಲಕೆದ್ದರೆ ಸುವ್ವಲಾಲಿ
ಹೊಳೆವ ಲಿಂಗ ಕರದಲ್ಲಿ ಕಂಡು ಸುವ್ವಲಾಲಿ
ಬಳಿಗೆ ಬಾರೆಂದ ಕುಕುಹಾಯ್ತು ಸುವ್ವಲಾಲಿ

ಒಡನೆಯೆ ಕರಸ್ತಲದಲ್ಲಿ ಕಂಡ ಆ ಶಿವಲಿಂಗ ಮಾಯವಾಗುತ್ತದೆ. ಬಾಲ ಬಸವ ದಿಗ್ಭ್ರಾಂತನಾಗಿ ಬಿಕ್ಕಿ ಬಿಕ್ಕಿ ಅಳುತ್ತಾನೆ.

ಹೊಳೆಯ ಬದಿಯಲೊಬ್ಬ ಸಿದ್ಧ ಸುವ್ವಲಾಲಿ
ಅಳುವ ಬಾಲನ್ನ ಕಂಡಾನೆ ಸುವ್ವಲಾಲಿ
ಸುಳುವ ಕೇಳಿಸಿದ್ದ ಗುರು ಸುವ್ವಲಾಲಿ
ಕಳೆದ ಶಿವಲಿಂಗ ಬೇಕೆಂದನೆ ಸುವ್ವಲಾಲಿ

ಸಿದ್ಧ ಗುರುವಿಗೆ ಅಚ್ಚರಿಯಾಗುತ್ತದೆ. ಏಳು ವರ್ಷದ ಹುಡುಗ ಶಿವಲಿಂಗ ಹುಡುಕಿ ಅಳುತ್ತಿದ್ದಾನೆ. ಅವನ ಕಣ್ಣುಗಳಲ್ಲಿ ಭಕ್ತಿರಸ ಕಂಬನಿಯಾಗಿ ಜಿನುಗುತ್ತಿದೆ, ಆ ಬಾಲಕನನ್ನು ಸಿದ್ಧಗುರು ದೇವಾಲಯಕ್ಕೆ ಕರೆದೊಯ್ಯುತ್ತಾನೆ.

ಸಂಗಯ್ಯನೆಂದು ಹೆಸರು ಸುವ್ವಲಾಲಿ
ಸಂಗಿಗಳ ಭಂಗ ಹರಿಸಿ ಸುವ್ವಲಾಲಿ
ನಿಸ್ಸಂಗಿಗಳ ಸೇವೆಕೊಂಬ ಸುವ್ವಲಾಲಿ
ಮಂಗಳವ ನೀಡ್ವ ಜನಕೆ ಸುವ್ವಲಾಲಿ

ಶಿವಲಿಂಗದೆದುರು ನಿಂತು ಸಿದ್ಧಗುರು ಪರಿಚಯ ಮಾಡಿ ಕೊಟ್ಟಾಗ ಸಂಗ ತೊರೆದು ನಿಸ್ಸಂಗಿಯಾಗಿ ನಿಂತ ಬಸವಣ್ಣ ಶಿವಲಿಂಗವನ್ನು ತಬ್ಬಿಕೊಂಡು ಬಿಕ್ಕಿ ಬಿಕ್ಕಿ ಅಳುತ್ತಾನೆ

ಸರ್ವಸಂಗ ತ್ಯಜಿಸಿ ನಾನು ಸುವ್ವಲಾಲಿ
ಸಂಗಯ್ಯಾ ನಿನ್ನ ಹುಡುಕಿ ಬಂದೆ ಸುವ್ವಲಾಲಿ
ಭಂಗ ಹರಿಸಿ ಕಾಯೊ ಎನ್ನ ಸುವ್ವಲಾಲಿ
ಭಕ್ತನಾಗಿ ಸ್ವೀಕರಿಸೊ ಸುವ್ವಲಾಲಿ

ಆತ್ಮದಿಂದ ಹೀಗೆ ಮೊರೆ ಹೊಕ್ಕು ಬೇಡುತ್ತಿದ್ದಂತೆಯೆ ಲಿಂಗದಿಂದ ಹೂವುದುರಿ ಶುಭಶಕುನವಾಗುತ್ತದೆ. ಬಸವಣ್ಣ ಅಂದಿನಿಂದ ಅಲ್ಲಿಯೇ ನೆಲಸುತ್ತಾನೆ.

# ಮಹಾಕವಿ ಷಡಕ್ಷರ ದೇವ

(ದರ್ಶನ ಗೀತ ಭಾವಗಂಗಾ ಲಹರಿ)

ಶ್ರೀ ಮೋಟಗಿ ಮಲ್ಲಿಕಾರ್ಜುನ "ಕನ್ನಡ ಕವಿ ಕಾಳಿದಾಸ" ಅಥಣಿ.

ಷಡಕ್ಷರದೇವನನೊಲ್ದು ಕೈಪಿಡಿದಿಯೆ ತಾಂ ಕವಿತಾರಮಣಿ ಬಾಲ್ಯದೊಳ್
ಮೃಡಭಕ್ತಿ ರಸಾಂಬುಧಿಯೊಳ್ ಮುಳುಗೇಳ್ದು ಶಿವಕವಿ ನೀಡೆ ಕೃತಿರತ್ನಂಗಳವಂ
ದೃಢಸಂಕಲ್ಪನುಮಾಧವ ಕೃಪೆಯಿಂ ರಚಿಸಿದನ್ "ಬಸವರಾಜ ವಿಜಯಂ"
ಕಡುಪ್ರೀತಿ ಕನ್ನಡಮೂರ್ತಿ ಬಸವಣ್ಣ ವಿರಾಜಿಸನಲ್ತೆ ? ಧಾತ್ರೀತಲದೊಳ್ 1

ಮುರುಗ ತ್ರಿಶೂಲಧರ ಶಂಭು ಸ್ತುತಿಕೃತಿಯೆನೆ "ಶಬರಶಂಕರವಿಳಾಸಂ"
ಮಮ! ಸಂಸ್ಕೃತ "ಕವಿಕರ್ಣರಸಾಯನಂ" ಕವಿಕುಲಕೆ ಕರ್ಣರಸಾಯನಂ
ರಣೀಯ ಕೃತಿರಾಜಂ "ರಾಜಶೇಖರವಿಳಾಸಂ" ರಾಜಿಸೆ ಕನ್ನಡದೊಳ್ ಕೃತಿ
ಮಾಲರಾಜಿ ರಂಜಿಪಾ ಸರಸಿತಾನೆನುವವೊಲೆಸೆದನಯ್ ಷಡಕ್ಷರಕವಿದೇವಂ 2

ಕ್ಷಮಾಗುಣ ಧೃತಿಯುಕ್ತಂ ಜ್ಞಾನಸಂಸದ್ಭರಿತಂ ವಿರತಂ ಸುಚರಿತಂ ಜಿತ
ಕಾಮಂ ಗುರುಮಠನಿವಾಸಿಯೆನೆ ಕಂಗೊಳಿಸಂ ಕವಿಸಾರ್ವಭೌಮಂ
ಕೀರ್ತಿಲಲಾಮಂ
ಪ್ರೇಮಳ ಪರಿಮಳ ಕಳಾಮೂರ್ತಿ ಪ್ರತಿಭಾಸಂಪನ್ನಂ ಷಡಕ್ಷರದೇವಂ
ಸೋಮರವಿ ಪ್ರತಿಭಾಭಾಸಮಾನನೆನಲ್ ಸಮನೆನಿಬರಾರ್ ವಸುಮತಿಯೊಳ್ 3

ಸುಧಾಸಾಗರಮೆನಲ್ "ಭಕ್ತಾಧಿಕ್ಯರತ್ನಾವಳಿ" "ಶಿವಾಧಿಕ್ಯರತ್ನಾವಳಿ"
ಧರಕಾಂತಿ ಕೈವಲ್ಯಕಲ್ಪವಲ್ಲರಿ "ಶಿವಸ್ತವಮಂಜರಿ" ಕನ್ನಡಬಸವಸ್ತುತಿ"
ಸಮ ವೀರಶ್ರೀ "ವೀರಭದ್ರಗದ್ಯಂ" ಬಸವೇಶ್ವರಾಷ್ಟಕಂ" "ವೀರಭದ್ರದಂಡಕಂ"
ವದನೆ "ನೀಲಾಂಬಿಕಾಸ್ತೋತ್ರಂ" "ಸಿದ್ಧಲಿಂಗಸ್ತವನಂ" ಇಂತಿ ಕೃತರಾಜನ್ 4

ದೇವಭೂಮಿಯೊಳೆಸೆಯಿತ್ತು ಸಾಕಾರಮಂತ್ರಮೂರ್ತಿ ಬಸವನಾಭಕ್ತಿ ಕೀರ್ತಿಜ್ಯೋತಿ
ಭೂವಲಯ ಕೈಲಾಸಮೆನಿಸಿರಲಲ್ಲಿ ಕಲ್ಯಾಣದನುಭಾವಮಂಟಪದಲ್ಲಿ
ಅಲ್ಲಮಪ್ರಭುಸಮ್ಮುಖದಲ್ಲಿ
ದೇವತತ್ವ ಬೀಜಂಗಳಂ ಬಿತ್ತಿ ಬೆಳೆಸುತ್ತೆ ಪ್ರಮಥಗಣಾಧೀಶರೆಲ್ಲಅನುಭವಂ
ತಿಳಿಪುತ್ತೆ
ದೈವಧೃತಿವೆತ್ತು ಧರ್ಮೋನ್ನತಿಯಂ ಗೆಯ್ಯುತ್ತೆ. ವಿಶ್ವಕ್ಕೆ ಶಾಂತಿ ಸಂದೇಶ
ನೀಡುತಿರಲ್ 5

ವಚನ ವಾಙ್ಮಯದನುಭಾವ ಸೂಕ್ತಿಗಳಗಣಿತವಾಗೆ ಕೋಟಿಗಳ್ಗೆ ಮಿಗಿಲೆನಿಸಿದುವವರ್
ರಚಿಯಿಸಿರ್ದ ಬಸವಾದಿಪ್ರಮುಖರಾ ವಚನಂಗಳ್ಗಾಮ್ನಾಯಾಗಮಂಗಳ್
ಸಮಾಬಾರವಯ್
ಸುಚರಿತ ಮಹಾತ್ಮರೆನೆ ಬುದ್ಧಕ್ರಿಸ್ತಗಾಂಧಿರಾಮಕೃಷ್ಣ ಅರವಿಂದರ್ ಧರ್ಮರಹಸ್ಯ
ತಿಳಿಪಿದರ್
ಅಚಲಭಕ್ತಿ ಸಂತರೆನೆ ಜ್ಞಾನೇಶ್ವರ ತುಕಾರಾಮ ಮತ್ತೆ ಮೀರಾ ಸಾವಿತ್ರಿ ಮಹದೇವಿ
ಯಕ್ಕಂಗಳ್ 6

ಮಹಾಕವಿ ಪೇಳ್ದನುಭಾವಕೃತಿಗಳೊಳ್ ಶರಣಗಣಕಥಾವಳಿಯೆಂ ಜ್ಞಾನಸಂಪತ್ತಿಯೆಂ
ಆಹಹ! ಅಕ್ಷಮಾಕ್ಷನಚ್ಚರಿ ಬಡುವವೊಲಾದ್ಭುತವಪಾರ ರಮ್ಯಚಿತ್ರ ವೈಚಿತ್ರ್ಯಂ
ಮೋಣ್ಕವಿ
ಮಹಾಂತರಾತ್ಮದರ್ಶನಂ ಮತ್ತವರ ಗುಣವರ್ಣನಂ ದೇವಶಾಸನರಹಸ್ಯಮುಮಂ
ಸಕಳದರ್ಶನಂ ಮಾಳ್ಪಂ
ಮಹಿಮಾನ್ವಿತಂ ಧರ್ಮತತ್ತ್ವಗಳಾರಾಶಿಯಂ ನಿಲಿಸಿ ಮೆರೆದಂ ಮಹೀತಳ
ದೋಳದನೇನೆಂಬೆನಾನದ್ಭುತವನು 7

ಹಾಲುಹೊಳೆ ಹರಿಯುತಿರಲ್ ರಸವತ್ಕವಿತೆಯೋಳ್ ನವರಸಾಲಂಕಾರ ಕೃತಿರ
ಸಾಲವೃಕ್ಷಕೆಳೆಸಿವಾ ತನಿವಣ್ಗಳೆನಿತು ಸವಿದೊಡಂ ಮತ್ತೆ ಪೆರ್ಚುತ್ತೆ
ಫಲಭರಿತವಾಗಿಳೆಗೆ
ಬೀಳುತ್ತಂ ಮಾನವರ್ಗೆ ಸವಿಸುಧಾರಸವನುಣಿಸುತ್ತಂ ವಿಶ್ವಶಾಂತಿ ಮಾಳ್ಪವಯ್
ಕಾಲಯುಗ ವ್ಯತ್ಯಯಂಗಳಂ ಜಯಿಸಿರ್ದುರ್ವಿಯೊಳ್ ತತ್ತ್ವಕೃತಿಗಳಂತ
ಮರವೆನಿಸಿರ್ಪುದಯ್ 8

ಕಸ್ತೂರಿ ಸೌಗಂಧ ಕಮನೀಯ ಸುಮ ಮಕರಂದ ಕನ್ನಡಕವಿ ಮಾಕಂದ ದೇವಕವಿ
ಭಸಿತ ಭೂಷಣನೆನಲಿವನು ಕವಿಕುಲಕೆ ಕವಿದೇವ! ಮಹಾಕವಿ ಷಡಕ್ಷರದೇವ
ವಸುಧಾಂಗನೆಗೆಯ್ದ ಬಹುಕಾಲ ತಪದಿಂದವತರಿಸಿ ಬಂದನಲ್ತೆ ?ಕವಿ ಧರೆಗೆ
ಸೃಷ್ಟಿಸಿದಂ ತನ್ಮಹಾಕಾವ್ಯದೊಳ್ ಶರಣಗಣಗುಣಮಣಿ ಬಸವನಂ
ಚನ್ನಬಸವನಂ ಪ್ರಭುದೇವನಂ 9

ವಿಲಸತ್ಪ್ರತಿಮಾಕೃತಿಲಲನೆ ನರ್ತಿಸುತಿರಲ್ ಕಾಲ್ಗೆಜ್ಜೆ ಝುಣ್
ಝುಣಲ್ಲೆನುತಿರಲ್ ಮಂ
ಜುಳರವನಿನಾದಂ ದಶದಿಶಾಂಗನೆಯನಾವರಿಸುತ್ತಮುಂ ಬೃಹತ್ಗಗನಾಂಗಣದೊಳ್
ಕಲೆತು ಪ್ರತಿಧ್ವನಿಸುತಿರಲದಕೇಳ್ದ ಕೈಲಾಸಾಧಿಪತಿಶಂಕರಂ ಸಂತಸಂದಾಳ್ದಿರಲ್
ಸಲೆಗಿರಿಜೆಯುಳಿಗಿಳಿದು ಬಂದು ಸುರಲ್ಕೆ "ಕನ್ನಡಕವಿಕಾಳಿದಾಸಂ" ಗೀತಗಂಗಾ
ಹರಿಸಿಹನ್ 10

# ಬಸವತತ್ತ್ವ ರತ್ನಾಕರ

(ಅಪ್ರಕಟಿತ ವಚನಕಾವ್ಯ ಸುಧಾರಸ ಗ್ರಂಥದಿಂದ)

—ಶ್ರೀವೀರೋಟಗಿ ಮಲ್ಲಿಕಾರ್ಜುನ ಅಥಣಿ, ಬೆಳಗಾಂ ಜಿಲ್ಲೆ.

## 1 ಬಸವಣ್ಣ ಅನಾದಿ ಶರಣ ಉದಯ

"ಆದಿಯಾಧಾರವಿಲ್ಲದಂದು ಸುರಾಳನಿರಾಳವಿಲ್ಲದಂದು,
ಶೂನ್ಯನಿಶ್ಶೂನ್ಯವಿಲ್ಲದಂದು ನಾದಬಿಂದು ಕಳೆಗಳಿಲ್ಲದಂದು,
ಆಕಾಶಪ್ರಕಾಶಗಳಿಲ್ಲದಂದು ಸಚರಾಚರವೆಲ್ಲ ರಚನೆಗೆ ಬಾರದಂದು,
ಶ್ರೀಶೈಲಮಲ್ಲಿಕಾರ್ಜುನಾ, ನಿಮ್ಮ ಶರಣ ಬಸವಣ್ಣ ಉದಯವಾದನಂದು."

## 2 ಮಹಾಲಿಂಗ ವೃಕ್ಷ ಉತ್ಪತ್ತಿ

"ಪರಶಿವ ಮಹಾಮಂತ್ರಮೂರ್ತಿ ಬಸವರಾಜ ಮಹಾದೇವ ನೋಡಾ.
ಪರಶಿವತತ್ತ್ವವೆಂದಡೂಂ ಒಂದೆ! ಬಸವತತ್ತ್ವವೆಂದಡೂಂ ಒಂದೆ! ನೋಡಾ.
ಇಂತಿವು ಒಂದೇ ನಾಣ್ಯದ ಎರಡುಮುಖಗಳಿದ್ದಂತೆ ನೋಡಾ.
ಬಸವತತ್ತ್ವವೆಂದೆಡೆ ಶಿವಸಮುದ್ರವಿದ್ದಂತೆ ನೋಡಾ.
ಈ ಶಿವಸಮುದ್ರದೊಳಗಣ ಅನರ್ಘ್ಯರತ್ನಂಗಳೆಲ್ಲ ಪ್ರಮಥಗಣನೋಡಾ.
ಈ ರತ್ನಂಗಳ ರಾಶಿಯಲ್ಲಿ ಅನರ್ಘ್ಯರಹಸ್ಯರತ್ನಂಗಳೂ ಉಂಟು ನೋಡಾ.
ಇಂತಪ್ಪ ಅನಾದಿಶರಣಬಸವೇಶ್ವರ ಮಹಾತ್ಮ್ಯೆಗೆ ಆದಿ ಅಂತ್ಯವಿಲ್ಲ ನೋಡಾ.
ಬಸವೇಶ ಬ್ರಹ್ಮಾಂಡಸೃಷ್ಟಿಲೀಲೆ ಅನಂತಾನಂತ ರೂಹುದಳೆದು
'ಮಹಾಲಿಂಗವೃಕ್ಷ'ವಾಗಿ ಅನಾದ್ಯನಂತವಾಗಿ ಬೆಳೆದು ನಿಂದಿತ್ತು ಕಾಣಾ,
ಶ್ರೀಶೈಲಮಲ್ಲಿಕಾರ್ಜುನ!"

## 3 ಮಹಾಲಿಂಗ ಲೀಲೆ

"ಶರಣನ ಮೂರ್ತಿಯಿಂದಲಾದ ಸದಾಶಿವ.
ಆ ಸದಾಶಿವನ ಮೂರ್ತಿಯಿಂದಲಾದ ಶಿವ.
ಆ ಶಿವನ ಮೂರ್ತಿಯಿಂದಲಾದ ರುದ್ರ.
ಆ ರುದ್ರನ ಮೂರ್ತಿಯಿಂದಲಾದ ವಿಷ್ಣು.
ಆ ವಿಷ್ಣುವಿನ ಮೂರ್ತಿಯಿಂದಲಾದ ಬ್ರಹ್ಮ.
ಆ ಬ್ರಹ್ಮನ ಮೂರ್ತಿಯಿಂದಲಾದವು ಸಕಲ ಜಗತ್ತುಗಳೆಲ್ಲಾ!
ಇವರೆಲ್ಲ ನಮ್ಮ ಶ್ರೀಶೈಲಮಲ್ಲಿಕಾರ್ಜುನನ ಕರಸ್ಥಲದ ಹಂಗಿನಲ್ಲಿ ಹುಟ್ಟಿಬೆಳೆದರು."

## 4 ಷಟ್‌ಸ್ಥಲ ತತ್ತ್ವ ಉತ್ಪತ್ತಿ

"ಪ್ರಪ್ರಥಮದಲ್ಲಿ ಪರವಸ್ತು ಅನಿರ್ವಚನೀಯವಾಗಿದ್ದಿತ್ತು!
ಆ ಅನಿರ್ವಚನೀಯವಾಗಿದ್ದ ಪರವಸ್ತು ತನ್ನ ಲೀಲೆಯಿಂದ
ತಾನೆ ಪರಬ್ರಹ್ಮವೆಂಬ ಹೆಸರಾಗಿತ್ತು.
ಆ ಪರಬ್ರಹ್ಮವೆಂಬ ಹೆಸರು ಹೊಂದಿ ಕುಳವಾಯಿತ್ತು.
ಆ ಕುಳದಿಂದ ಆತ್ಮನೆಂಬ ಲಿಂಗಸ್ಥಲವಾಯಿತ್ತು.
ಆ ಸ್ಥಳ ಕುಳದೊಳಗೆ ಹೊಂದಿ (ಕೂಡಿ) ಸ್ಥಳಕುಳವೆಂಬೆರಡಿಲ್ಲದೆ ನಿಂದಿತ್ತು.
ಅದು ಹೇಗೆಂದಡೆ:
ವಾಙ್ಮನಕ್ಕಗೋಚರವಾದ ಪರಬ್ರಹ್ಮದಿಂದ ಭಾವವಾಯಿತ್ತು.
ಭಾವದಿಂದ ಜ್ಞಾನವಾಯಿತ್ತು. ಜ್ಞಾನದಿಂದ ಮನವಾಯಿತ್ತು.
ಮನದಿಂದ ಬುದ್ಧಿಯಾಯಿತ್ತು. ಬುದ್ಧಿಯಿಂದ ಚಿತ್ತಾಯಿತ್ತು. ಚಿತ್ತದಿಂದ ಅಹಂಕಾರವಾಯಿತ್ತು.
ಇಂತೀ ಅಹಂಕಾರ ಚಿತ್ತ ಬುದ್ಧಿ ಮನ ಜ್ಞಾನ ಭಾವನೆಂದಾರಾದವು.
ಈ ಆರು ಕೆಟ್ಟಲ್ಲದೆ ವಾಙ್ಮನಕ್ಕಗೋಚರವಾದ ಪರಬ್ರಹ್ಮವಾಗಬಾರದು.
ಇವ ಕೆಡಿಸುವದಕ್ಕೆ ಆರು ಸ್ಥಲವಾದವು.
ಅವಾವವೆಂಡೆ:

ಅಹಂಕಾರವಡಗಿದಾಗ ಭಕ್ತಿಸ್ಥಲವಾಯಿತ್ತು.
ಚಿತ್ತದ ಗುಣ ಕಟ್ಟಾಗ ಮಾಹೇಶ್ವರ ಸ್ಥಲವಾಯಿತ್ತು.
ಬುದ್ಧಿಯ ಗುಣ ತೊರೆದಾಗ ಪ್ರಸಾದಿಸ್ಥಲವಾಯಿತ್ತು.
ಮನೋ ಗುಣವಳಿದಾಗ ಪ್ರಾಣಲಿಂಗಿಸ್ಥಲವಾಯಿತ್ತು.
ಜೀವನಗುಣ ಸಂದಾಗ ಶರಣಸ್ಥಲವಾಯಿತ್ತು.
ಭಾವ ನಿರ್ಭಾವವಾದಾಗ ಐಕ್ಯಸ್ಥಲವಾಯಿತ್ತು.
ಇಂತೀ ಷಟ್‌ಸ್ಥಲವಾಗಿ ವಾಙ್ಮನಕ್ಕಗೋಚರವಾದ ಬ್ರಹ್ಮವೇ ಆತ್ಮನು.
ಆ ಆತ್ಮನಿಂದ ಆಕಾಶ ಹುಟ್ಟಿತ್ತು. ಆ ಆಕಾಶದಿಂದ ವಾಯು ಹುಟ್ಟಿತ್ತು.
ಆ ವಾಯುವಿನಿಂದ ಅಗ್ನಿ ಹುಟ್ಟಿತ್ತು. ಆ ಅಗ್ನಿಯಿಂದ ಅಪ್ಪು ಹುಟ್ಟಿತ್ತು
ಆ ಅಪ್ಪುವಿನಿಂದ ಪೃಥ್ವಿ ಹುಟ್ಟಿತ್ತು.
ಇಂತೀ ಕುಳಸ್ಥಳವಾಗಿ ಸ್ಥಳಕುಳವಾದ ವಿವಳವೆಂತೆಂದಡೆ:
ಪೃಥ್ವಿ ಅಪ್ಪುವಿನೊಳಡಗಿ, ಅಪ್ಪು ಅಗ್ನಿಯೊಳಡಗಿ,
ಅಗ್ನಿ ವಾಯುವಿನೊಳಡಗಿ, ವಾಯು ಆಕಾಶದೊಳಡಗಿ,
ಆಕಾಶ ಆತ್ಮನೊಳಡಗಿತ್ತು; ಆತ್ಮ ಪರಶಿವನಲ್ಲಿ ಅಡಗಿತ್ತು.
ಇಂತೀ ಷಡಂಗವಡಗಿದ ಪರಿಯೆಂತೆಂದಡೆ:

ಪೃಥ್ವಿ ಭವೇತ್ ಜಲೇ ಮಗ್ನಾ ಜಲಂಗ್ರಸ್ತಂ ಮಹಾಗ್ನಿನಾ।
ವಾಯೋರಸ್ತಮಿತಂ ತೇಜೋ ವ್ಯೋಮ್ನಿ ವಾತೋ ವಿಲೀಯತೇ।
ವ್ಯೋಮಾತ್ಮನಿ ವಿಲೀನಂ ಸ್ಯಾತ್ ಆತ್ಮಾ ಪರಶಿವೇ ಪದೇ ॥ ಎಂದುದಾಗಿ,
ಆತ್ಮನು ಪರಬ್ರಹ್ಮದೊಳಡಗಿ ನಿಂದಿತ್ತು ಶ್ರೀಶೈಲಮಲ್ಲಿಕಾರ್ಜುನ."

## 5 ಪ್ರಭು ವಾಣಿ

"ಬಸವಾ! 'ನೀ ಮಾಡಲಾಗಿ ಅನಾದಿ ಸು' ಎಂಬಾ ಅಲ್ಲಮಪ್ರಭು ಅಮೃತವಾಣಿ:
"ಧರೆಯಾಕಾಶ ತಾರಾಮಂಡಲ ಸಪ್ತಸಮುದ್ರಗಳಿಲ್ಲದಂದು,
ಒಂದು ಮಹಾವೃಕ್ಷವಿದ್ದಿತ್ತಯ್ಯಾ
ಆ ವೃಕ್ಷವ ಕಂಡು ನಾನ 'ಓಂ ನಮಃ ಶಿವಾಯ' ಎನ್ನುತಿದ್ದೆನು.
ಆ ವೃಕ್ಷದಿಂದ ಷಡುಸಾದಾಖ್ಯಂಗಳು ಪುಟ್ಟಿದವು.
ಆ ಷಡುಸಾದಾಖ್ಯಂಗಳ ಸೇಲಲ್ಲಿ ಕುಳ್ಳಿರ್ದು
ನಾನು ಬಸವಾ ಬಸವಾ ಬಸವಾ ಎನುತಿರ್ದೆನು ಕಾಣಾಗುಹೇಶ್ವರಾ
ಇಂತೆಂದುದಾಗಿ ಅನಾದಿ ಶರಣ ಬಸವರಾಜದೇವರ ಅಪಾರ ಅನಂತ ಮಹಾತ್ಮ್ಯಯಂ
ಆ ಸಾಹಸ್ರ ನಾಲಗೆಯಾ ಆದಿ ಶೇಷಂಗೆ ಬಣ್ಣಿಸಲಸದಳವಾಗಿಲ್ಕೆ ಇನ್ನು
ನಾನೆಂತು ವರ್ಣಿಪುದು ಹೇಳಾ ? ಶ್ರೀಶೈಲಚೆನ್ನಮಲ್ಲಿಕಾರ್ಜುನ !"

## 6 ಬಸವ ಮಂತ್ರ ಮಹಾತ್ಮ್ಯ

'ಅಯ್ಯಾ! ಅನಾದಿ ಶರಣ ಬಸಣ್ಣ ಮಹಾಮಂತ್ರಮೂರ್ತಿಯಾಗಿರ್ದ ನೋಡಾ!
'ಓಂ ನಮಃ ಶಿವಾಯ' 'ಶಿವ ಮಂತ್ರವಿದು ಸಪ್ತಕೋಟಿ ಮಂತ್ರಂಗಳಿಗೂ
ಅಧಿಕವೆನಿಸಿ ಸಕಲಸುಖಸಿದ್ಧಿಪ್ರದಾಯಕವೆನಿಸಿರ್ಪುದು ನೋಡಾ !
ಶಿವಮಂತ್ರ ಮಹಿಮೆ:
ಕಂದ॥ ಪಲಿಸಪ್ತಕೋಟಿ ಮಂತ್ರಂ।
ಗಳಿಗಧಿಕವೆನೆ ಮಿಗೆ ಕಂಗೊಳಿಪ ಶಿವಮಂತ್ರಂ॥
ಒಲವಿನಲಿ ಶರಣನನಿಶಂ।
ನಲಿನಲಿದು ನುತಿಸುತಿರಲಿಳೆಯೊಳ್ ಬೆಳಗುವದಯ್ ॥

ಶಿವಾನುಭವದರ್ಪಣ ಅಥವಾ ಮೋಕ್ಷಚಿಂತಾಮಣಿ ಕಾವ್ಯ–ಪ.೧೪

ಇಂತೆಂದುದಾಗಿ ಶಿವಮಂತ್ರದಿಂದಧಿಕ ಮಂತ್ರವಿಲ್ಲೆಂಬ ಸಕಲ ಶೃತಿವಾಣಿ
ಸಾರ್ವಕಾಲಿಕ (ತ್ರಿಕಾಲ) ನಿಜಕ್ಕೂ ಸತ್ಯನೋಡಾ
ಇಂತಪ್ಪ ಮಂತ್ರಮೂರ್ತಿ ಆ ಶಿವನ ಸೃಷ್ಟಿಸಿ, ಆ ಪರಶಿವನ ಮಹಿಮೆಯಾ

'ಓಂ ನಮಃ ಶಿವಾಯ' ಎಂಬೀಶಿವಮಂತ್ರ ಮಹಾತ್ಮೆಯಂ ತೋರಿ
ಶಿವಸರ್ವೋತ್ತಮತ್ತ್ವಮಂ ಸಾರಿ ನಿಂದಾತ, ಪರಶಿವಸಾಕಾರಮೂರ್ತಿ
ಬಸವರಾಜದೇವರು ನೋಡಾ !
ಇಂತಪ್ಪ 'ಓಂ ನಮಃ ಶಿವಾಯ' ಶಿವಮಂತ್ರವಾ ಶಿವತತ್ತ್ವರತ್ನಂಗಳೆಲ್ಲವೂ
ಈ ಅನಾದಿ ಶರಣ ಬಸವತತ್ತ್ವಸಾಗರದೊಳ್ ಹುದುಗಿರ್ಪುದು ನೋಡಾ !
'ಓಂ ನಮಃ ಶಿವಾಯ' ಈ ಶಿವಮಂತ್ರರಹಸ್ಯಾರ್ಥವನೆಲ್ಲವುಂ ಒಳಗೊಂಡಿಪ್ಪಾ
'ಶ್ರೀ ಗುರುಬಸವಲಿಂಗಾಯ ನಮಃ' ಬಸವಮಂತ್ರಮಹಾತ್ಮ್ಯೆ ನೋಡಾ!

॥ಶ್ರೀ ಗುರು ಬಸವಲಿಂಗಾಯನಮಃ॥ ವ್ಯಾಖ್ಯೆ ಇಂತು:

ಶ್ರೀ—ಷಡ್ಗುಣೈಶ್ವರ್ಯಯುಕ್ತವಾದ ಸಂಪತ್ಕರವವನುಳ್ಳಂಥ
ಗುರು—ಸರ್ವಪೂಜ್ಯಪ್ರಭು ಮುಕ್ತಿಪ್ರದಾಯಕನಾದಂಥ
ಬಸವ—'ಬ' ಕಾರವೆ ಭವಹರ ಗುರು, 'ಸ' ಕಾರವೆ ಸಕಲ ಚೈತನ್ಯಾತ್ಮಕ
ಲಿಂಗವು,
'ವ' ಕಾರವೆ ವಚಿಸುವುಕ್ಕೆ ಕಾರಣವಾದ ಮಹಾನುಭಾವ ಮೂರ್ತಿಯಪ್ಪ
ಜಂಗಮವು,
ಇಂತೀ 'ಗುರುಲಿಂಗಜಂಗಮ' ಸ್ವರೂಪವಾದ
ಲಿಂಗ—ಲಯಗಮನಂಗಳಿಗಾಲಯವಾದ ಮಹಾಲಿಂಗವು,
ಆಯ — ಅಂತಪ್ಪ ಇಷ್ಟಸ್ವರೂಪವಾದಾತನೇ ಬಸವೇಶ್ವರನು.
ಅಂತಹಸಂಗನ ಬಸವೇಶ್ವರಸ್ವಾಮಿಗಳೆಂಬ ಮಹಾಜ್ಞಾನಗುರು
ತತ್ತ್ವಕ್ಕೋಸ್ಕರ,
ನಮಃ—ಸಹಜ ಭಕ್ತಿ ಭಾವಾನಂದಯುಕ್ತ ನಮಸ್ಕಾರವು.

॥'ಶ್ರೀಗುರು ಬಸವಲಿಂಗಾಯ ನಮಃ'॥

ಶ್ರೀ—ಐಶ್ವರ್ಯಸ್ಯ ಸಮಗ್ರಸ್ಯ ವೀರ್ಯಸ್ಯ ಯಶಸಃ ಶ್ರಿಯಃ। ಜ್ಞಾನವೈರಾಗ್ಯ
ಯೋಶ್ಚೈವಷಣ್ಣಾಂ ಭಗ ಇತೀರಿತಃ॥
ಗುರು—ಗುಕಾರಸ್ತ್ವರೂಪಂ ಚ ರುಕಾರೋ ಮಮರೂಪಕಃ।ಉಭಯೋಸ್ಸಂಗ
ಸೌಖ್ಯಂಚಗುರೋರ್ವರ್ಣಂ ಜಪೇತ್ಸುಧೀಃ॥
ಗುಕಾರಸ್ತ್ವೈಲವರ್ಣಂ ಚ ರುಕಾರಂ ಜ್ವಲತಸ್ಸ್ಮೃತಃ।ದ್ವಯೋರ್ಯೋಗ ಪ್ರಭಾವೇಣ
ಸ್ವಯಂ ಜ್ಯೋತಿರ್ಗುರು ಸ್ಮೃತಃ
ನ ಮುಕ್ತಿರ್ನ ಚ ಧರ್ಮಶ್ಚನಪುಣ್ಯಂ ಚನಪಾತಕಂ।ನಕರ್ಮಜನ್ಮನಶ್ಚೈವ
ಗುರುಪಾದ ನಿರೀಕ್ಷಣಾತ್ ॥
ಗುರುದೇವೋ ಮಹಾದೇವೋ ಗುರುದೇವಸ್ಸದಾಶಿವಃ। ಗುರುದೈವಾತ್ಪರಂ
ನಾಸ್ತಿತಸ್ಮೈಶ್ರೀಗುರವೇ ನಮಃ॥

ಅವಾಚ್ಯಕ್ಕಸ್ವರೂಪಾಯ ಶಿವಭಾವ ಪ್ರದಾಯಿನೇ। ನಮಸ್ಸದ್ಗುರುನಾಥಾಯ
ಷಟ್ಸ್ಥಲ ಬ್ರಹ್ಮಮೂರ್ತಯೇ ॥

ಧ್ಯಾನಮೂಲಂ ಗುರೋರ್ಮೂರ್ತಿಃಪೂಜಾಮೂಲಂ ಗುರೋಃಪದಂ। ಮಂತ್ರ
ಮೂಲಂಗುರೋರ್ವಾಕ್ಯಂ ಮುಕ್ತಿಮೂಲಂಗುರೋಃ ಕೃಪ ॥

ಬಸವ—ಬಕಾರೋ ಗುರುರೂಪಂಚ ಸಕಾರೋ ಲಿಂಗರೂಪಕಃ। ವಕಾರೋ
ಚರರೂಪಂಚ ತ್ರಿವಿಧಂ ಬಸವಾಕ್ಷರಂ ॥

ಬಕಾರೋ ನಾದರೂಪಂಚ ಸಕಾರೋ ಬಿಂದುರೂಪಕಃ। ಕಲಾರೂಪಂ
ವಕಾರಶ್ಚ ತ್ರಿವಿಧಂ ಬಸವಾಕ್ಷಯಂ ॥

ಬಕಾರೋಸತ್ವರೂಪಂಚ ಸಕಾರೋ ಚಿತ್‌ಸ್ವರೂಪಕಃ। ಆನಂದಶ್ಚಂವಕಾರಶ್ಚ
ತ್ರಿವಿಧಂ ಲಕ್ಷಣಂ ಶಿವೇ॥ ಎಂಬುದೀಗ,

ಲಿಂಗ—ಲಿಕಾರೋಲಯಸಂಪ್ರೋಕ್ತೋ ಗಕಾರಃ ಸೃಷ್ಟಿರೇವಚ। ಲಯನಾದ್ಗ
ಮನಾಚ್ಚೈವ ಲಿಂಗಾಕಾರ ಇಹೋಚ್ಯತೇ ॥

ಲೀಯತೇಗಮ್ಯತೇಯತ್ರ ಏಕಸ್ಸರ್ವಂ ಚರಾಚರಂ । ತದೇತಲ್ಲಿಂಗ ಮಿತ್ಯಾ
ಹುರ್ಲಿಂಗತತ್ತ್ವಪರಾಯಣಾಃ॥

ಆಕಾಶಂಲಿಂಗಮಿತ್ಯಾಹುಃ ಪೃಥ್ವೀತಸ್ಯಾದಿ ಪೀಠಿಕಾ॥ ಆಲಯಂಸರ್ವಭೂತಾನಾಂ
ಲಿಂಗಾಕಾರ ಇಹೋಚ್ಯತೇ ॥

ಲಿಂಗಮಧ್ಯೇ ಜಗತ್ಸರ್ವಂ ತ್ರೈಲೋಕ್ಯಂ ಸಚರಾಚರಂ। ಲಿಂಗಬಾಹ್ಯಾತ್
ಪರಂನಾಸ್ತಿತಸ್ಮಾತ್ ಲಿಂಗಪ್ರಪೂಜಯೇತ್ ॥ ಎಂಬುದೀಗ

ಆಯ—ಇಷ್ಟಸ್ವರೂಪನಾದಾತನೇ ಸಂಗನಬಸವೇಶ್ವರನು-ಅಂತಪ್ಪಸಂಗನ
ಬಸವೇಶ್ವರಸ್ವಾಮಿಗಳೆಂಬ ಮಹಾಜ್ಞಾನಗುರು ತತ್ತ್ವಕ್ಕೊಕ್ಕರ,
ನಮಃ—ನಮಸ್ಕಾರವೆಂದು ಈ ಶಾಸ್ತ್ರದ ಪ್ರಥಮ ಪ್ರಾರಂಭದಲ್ಲಿ ಪ್ರಮಥಾಚಾರ್ಯರು ಸಹಜಭಕ್ತಿ ಭಾವಾನಂದದಿಂ ಗುರು ನಮಸ್ಕಾರವ ಮಾಡಿ ಉದ್ಧರಿಸಿ ನಿರೂಪಿಸಿದರು ಎಂಬುದೀಗ ಶ್ರೀಗುರುಬಸವಲಿಂಗಾಯ ನಮಃ ಎಂಬ 'ಬಸವ ಮಂತ್ರ ಮಹಾತ್ಮ್ಯೆ'ಯ ವಿಶೇಷಾರ್ಥ. ಇಂತು ಮಹಾಜ್ಞಾನ ಗುರುತತ್ತ್ವಸ್ವರೂಪನಾಗಿಪ್ಪ 'ಬಸವಮಂತ್ರಮಹಾತ್ಮ್ಯೆ'ಯಿದುಕಾಣಾ ಶ್ರೀಶೈಲಚನ್ನಮಲ್ಲಿಕಾರ್ಜುನ!"

ಸೂಚನೆ:-'ಶ್ರೀಗುರುಬಸವಲಿಂಗಾಯ ನಮಃ' ಎಂಬ ಮಂತ್ರಾರ್ಥವನ್ನು ವಿವರಿಸುವಲ್ಲಿ ಡಾ॥ ಎಂ. ಎಂ. ಕಲಬುರ್ಗಿ ಅವರಿಂದ ಸಂಪಾದಿತವಾದ 'ಬಸವಣ್ಣನವರ ಟೀಕಿನ ವಚನಗಳು (ಸಂಪುಟ: ಒಂದು) ಎಂಬೀಗ್ರಂಥರತ್ನದ ಸಹಾಯವನ್ನು ನಾವು ಪಡೆದುಕೊಂಡುದಕ್ಕಾಗಿ ಅವರಿಗೆ ನಮ್ಮ ಕೃತಜ್ಞತೆಯ ವಂದನೆಗಳು-ವಿಶ್ವವಿಭೂತಿ ಬಸವೇಶ್ವರ ವಚನಾರ್ಥಗ್ರಂಥರತ್ನವನ್ನು ಸಂಪಾದಿಸಿದ ಆತ್ಮೀಯ ಬಂಧುಗಳಾದ ಡಾ॥ ಎಂ. ಎಂ. ಕಲಬುರ್ಗಿ ಅವರಿಗೆ ಮತ್ತೊಮ್ಮೆ ನಮ್ಮ ಅಭಿನಂದನೆಗಳು.

●

# ಆತ್ಮಬುದ್ಧಿ

—ಬಿ. ಎಸ್. ಕೃಷ್ಣಮೂರ್ತಿ
ನಂ, 5, ಸೀತಾವಿಲಾಸ ರಸ್ತೆ, ಮೈಸೂರು–570001

ಆತ್ಮಬುದ್ಧಿ" ಎಂಬುದಕ್ಕೆ ಮತ್ತೊಂದು ಹೆಸರು "ಸ್ವಬುದ್ಧಿಯೆಂದು" ಈ ಆತ್ಮ ಬುದ್ಧಿಯೇ ಸ್ವತಂತ್ರವಾದ ಬುದ್ಧಿ. ಇದಕ್ಕೆ ಕಡಿವಾಣವಿರುವುದಿಲ್ಲ. ಏಕೆಂದರೆ:—

"ಆತ್ಮಬುದ್ಧಿಸುಖಂಚೈವ ಗುರು ಬುದ್ಧಿರ್ವಿಶೇಷಿತಃ"

ಎಂಬ ವಾಕ್ಯದಂತೆ ಆತ್ಮಬುದ್ಧಿಯು ಬಲದಿಂದ ಯಾವ ಕಾರ್ಯವನ್ನಾಗಲಿ ಸುಸೂತ್ರ ವಾಗಿ ಸಾಧಿಸಬಹುದು. ಇದಕ್ಕೆ ಗುರು ಬುದ್ಧಿಯು ಸಾಕ್ಷಾತ್ಕಾರದಿಂದ ಇನ್ನೂ ಪ್ರಬಲಕಾರ್ಯಗಳನ್ನು ಸಾಧನೆ ಮಾಡಬಹುದಾಗಿದೆ. ಆದ್ದರಿಂದ ಗುರು ಹಿರಿಯರ ಮಾರ್ಗಾನುಸರಣೆಯಿಂದ ಅಧಿಕಸುಖವುಂಟು.

"ಪರಬುದ್ಧಿವಿನಾಶಾಯ ಸ್ತ್ರೀಬುದ್ಧಿಪ್ರಳಯಾಂತಕಾ ॥

ಇದನ್ನು ತಪ್ಪಿ ಪರರ ಹಿತವಾದದಿಂದ ಆತ್ಮನಾಶವಲ್ಲದೆ ಬೇರೆಯಿಲ್ಲ. ಅದರಲ್ಲೂ ಸ್ತ್ರೀ ಬುದ್ಧಿಯಿಂದ ಮಹಾ ಪ್ರಳಯವೆಂಬ ನೀತಿಶಾಸ್ತ್ರದ ಗುಟ್ಟನ್ನು ಅರಿತು ನಡೆದರೆ ಸರ್ವವೂ ಕ್ಷೇಮವಾಗುವದು ಎಂಬುದಕ್ಕೆ ಎರಡನೆಯ ಮಾತಿಲ್ಲ.

ಜನರಲ್ಲಿ ಕೆಲವು ಬಗೆಯುವರಿರುತ್ತಾರೆ, "ನರಿಯು ಯುಕ್ತಿ" ಎಂಬುವ ಗುಣವುಂಟು ಇಂಥವರ ನಡತೆಯಿಂದ ಅಪಮಾನವೂ, ಸರ್ವನಾಶವೂ ಆಗುವುದರಲ್ಲಿ ಸಂಶಯವಿಲ್ಲ. ಇದನ್ನರಿತು ನಡೆದರೆ ಕ್ಷೇಮ. 'ಇಂಥವರನ್ನು ಚಾಲೋಕಿನವರು'' ಎನ್ನುವರು, ಅಷ್ಟೆ!

ಕೆಲವರು ಹಿತಚಿಂತಕರಂತೆ ಸ್ನೇಹ ಬಯಸಿ ಬರುತ್ತಾರೆ. ಜನರನ್ನು ತಮ್ಮ ಮಾಯೋಪಾಯಗಳಿಂದ ಮರುಳು ಮಾಡುವರು. ಆಗ ಸ್ವಬುದ್ಧಿಯಿಂದ ತಿಳಿದು ನಡೆ ದರೆ ತಮಗೆ ಮೇಲ್ಮೆಯುಂಟು, ತಪ್ಪಿದರೆ ಹಳ್ಳಕ್ಕೆ ಬೀಳಬೇಕಾಗುವುದು. ಇಂಥಾ ಕುಜನರ ಸಂಗದಿಂದ ಅಭಿಮಾನ ಭಂಗವೇ ಸರಿ! ಈ ಜನರ ಮನಸ್ಸು ಕಲುಷಿತವಾದ ಸ್ವಾರ್ಥ ಸಾಧನೆಗಾಗಿ! ಆದ್ದರಿಂದ ಇದನ್ನು ತಿಳಿದು ಜಾಗೃತರಾಗಬೇಕು. ಇದು ಆತ್ಮಬುದ್ಧಿಯ ಸಂಕೇತವೇ ಆಗಿದೆ.

ಹಲವು ಜನರ ಮಾತಿನಲ್ಲಿ ಜೇನು ಸುರಿಯುತ್ತಿರುತ್ತದೆ. ಪರರಿಗೆ ಉಪಕರಿ ಸುವ ಮೇಲು ಹೊದಿಕೆ ಇರುತ್ತದೆ. ಮೊದಲಲ್ಲಿ ಇದು ಕಂಡು ಬರುವುದಿಲ್ಲ.

ಅವರ ಕಾರ್ಯಗಳಲ್ಲೂ ಸಂದೇಹ ಕಾಣ ಸಿಗದು. ಏಕೆಂದರೆ ಅಂಥವರ ಬೆಡಗಿನ ನುಡಿಗಳು ತಮ್ಮ ಹಿತಕ್ಕಾಗಿಯೇ ಎಂದು ಕೃತ್ರಿಮ ಅರಿಯದ ಜನರ ಮನಸ್ಸು ಹೇಳುತ್ತಿರುತ್ತದೆ. ಕೊನೆಗೊಮ್ಮೆ ತಾವು ಮೋಸಕ್ಕೊಳಗಾಗಿರುವುದು ಅರಿವಾಗುವುದು. ಆಗ ನೋವನ್ನನುಭವಿಸುತ್ತಾರೆ.

ಕೆಲವು ಜನರು ತಮಗೆ ಬುದ್ಧಿ ಸಾಲದೆಂದು ಪರರ ಸಲಹೆ ಕೇಳುವುದುಂಟು ಹೀಗೆ ಕೇಳುವಾಗ ಆ ಜನರು ಎಂಥವರೆಂದು ಪರ್ಯಾಲೋಚಿಸಿ, ಅವರು ಹಿತವಂತರೆಂದು ತಿಳಿದಾಗ ಮಾತ್ರವೇ ಅವರ ಸಲಹೆಗಳನ್ನು ಅನುಮೋದಿಸಬಹುದು.

ಒಟ್ಟಿನಲ್ಲಿ ಸಲಹೆ ಹೇಳುವವರ ಮನೋಧರ್ಮ ಎಂಥಹದೆಂದು ಪರೀಕ್ಷಿಸುವ ಸಂಕಲ್ಪವಿರಬೇಕು. ಅವರು ನಿಜವಾದ ಹಿತವಂತರೆಂದು ನಂಬಿಕೆ ಬಂದರೆ ಅವರ ಸಲಹೆಗಳು ಉಚಿತವೆಂದು ನಂಬಬಹುದು ಇದಕ್ಕೂ ಆತ್ಮ ಬುದ್ಧಿಯ ನೆರವು ಬೇಕಾಗುತ್ತದೆ. ಹೀಗಲ್ಲದೆ ಅಲ್ಪ ಬುದ್ಧಿಯನ್ನು ಅನುಸರಿಸಿ, ಪರಾವಲಂಬಿಗಳಾಗಿ ಅಧೋಗತಿಯನ್ನು ಪಡೆಯಬೇಕಾಗುವದು.

ಸಮಯ ಸಾಧಕರು ತಾವು ಕುಣಿಸಿದಂತೆ ಕುಣಿಯುವರೆಂಬುದನ್ನು ತಿಳಿದಾಗ, ಅಂಥಾ ಜನರನ್ನು ತಮ್ಮ ಬಲೆಗೆ ಬೀಳಿಸಿಕೊಂಡು ಆತ್ಮಲಾಭ ಪಡೆಯುತ್ತಾರೆ. ಅವರ ಚಾತುರ್ಯದ ಮಾತುಗಳಿಗೆ ಆತ್ಮಬುದ್ಧಿಯ ನೆರವು ಸಿಕ್ಕಿದಾಗ, ಅಸಾಧಕರು ತಾವೇ ಮೋಸ ಹೋಗುವರು. ಆದ್ದರಿಂದ ಪೂರ್ವಾಪರ ಯೋಚಿಸಿ ನಡೆಯಬೇಕು.

ಬುದ್ಧಿ ಕಡಿಮೆಯುಳ್ಳ ಕೆಲವರು "ಅಪ್ಪ ಹಾಕಿದ ಆಲದಮರ"ವೆಂಬಂತೆಯಾವ ಬಗೆಯ ಜನರಾದರೂ ಆಡುವುದನ್ನು ಅನುಮೋದಿಸುವ ಮನಸ್ಸುಳ್ಳವರಾಗಿರುತ್ತಾರೆ. ಅವರಿಗೆ ಆತ್ಮಬುದ್ಧಿಯನ್ನು ಉಪಯೋಗಿಸುವ ಚೈತನ್ಯವಾಗಲಿ, ದೂರದೃಷ್ಟಿಯಾಗಲಿ ಇರುವುದಿಲ್ಲ. ಏಕೆಂದರೆ ತನ್ನ ಹಿರಿಯರು ನಡೆದರು ಆದ್ದರಿಂದ ನಾನೂ ನಡೆಯುತ್ತೇನೆ. ಎಂಬ ಅಲ್ಪಬುದ್ಧಿ ಇರುತ್ತದೆ. ಇದರಿಂದ ಆತ್ಮವಿನಾಶದ ಮಾರ್ಗಕ್ಕೆಡೆಯಾಗುವುದು.

"ಪ್ರತ್ಯಕ್ಷ ನೋಡಿದರೂ ಪರಾಮರ್ಶಿಸಿ" ನೋಡುವ ಸ್ವಭಾವ ಬಂದರೆ ಆಗ ಯಾವ ಕುಜನರ ಮಾತೂ ನಡೆಯದೆ ಕ್ಷೇಮ ಸಂಚಯವಾಗುತ್ತದೆ. ಇದಕ್ಕೆ ಪ್ರತಿಯಾದರೆ ತಮ್ಮ ಮುಂದಿನ ಹಿತ ಮಾರ್ಗವು ತಪ್ಪಿ ಮಹಾ ಅನರ್ಥಗಳಿಗೆ ಒಳಗಾಗಬೇಕಾದೀತು!

ವಿದ್ಯಾವಂತರಾದರೂ ಅನೇಕರು ಆತ್ಮ ಬುದ್ಧಿಯ ವಿಕಾಸಕ್ಕೆ ಎಡೆಕೊಡದೆ ಅಂಥ ಕೋಪದ ಜನರ ಮಾತಿಗೆ ಬೆರಗಾಗಿ, ಅವರಾಡುವ ಮಾತುಗಳಿಗೆ ಬೆಲೆ

ಕೊಡುವರು. ಕಾಲ ಕ್ರಮೇಣ ಇದರಿಂದ ಪರಾರ್ಥ ಸಿದ್ಧಿಯೇ ಆಗಿ, ಸ್ವಸುಖ ಸ್ವಹಿತ ನಾಶವಾಗುತ್ತದೆ ಆದ ಕಾರಣ ಆತ್ಮ ಬಲವೇ ಬಲವೆಂದು ತಿಳಿದು ನಡೆಯುವ ಪರಿಪಾಠ ಕಲಿಯಬೇಕು,

ಈಗಿನ ಸ್ತ್ರೀಯರೂ ಸಹ ಆತ್ಮ ಬುದ್ಧಿಯು ವಿಕಸನವಾಗಿ ತಮಗೆ ಒದಗಿದ ಅನರ್ಥಗಳನ್ನು ಹೋಗಲಾಡಿಸಿಕೊಳ್ಳುವ ಸಾಮರ್ಥ್ಯ ಹೊಂದಿರುವರು. ಇದು ಅವರ ದೂರ ದೃಷ್ಟಿಯ ಫಲದಿಂದಾಗಿಯೇ ಅಲ್ಲದೆ ಅನ್ಯಥಾ ಅಲ್ಲ. ಆತ್ಮಜ್ಞಾನವು ಪುಷ್ಟೀಕರಿಸಿ, ಜ್ಞಾನಚಕ್ಷುವು ವಿಕಾಸ ಹೊಂದಿದಾಗ ಆತ್ಮ ಬುದ್ಧಿಯು ಕುದುರುತ್ತದೆ. ಆಗ ಸದದ್ವಿವೇಕವು ಮೊಳೆತು, ವೃದ್ಧಿಯಾಗಿ, ಸಚೇತ ಗೊಳ್ಳುವದು. ಇದರಿಂದ ಕಲ್ಯಾಣವಾಗುವುದಲ್ಲದೆ ತಮ್ಮ ಮೇಲ್ಮೆಗೂ ಸಹಕಾರಿ.

ಪಾಶ್ಚಾತ್ಯರಾದ ಸರ್. ಐಸಾಕ್ ನ್ಯೂಟನ್; ಸರ್. ಹಂಫ್ರಿದೇವಿ; ಮೈಕೇಲ್ ಫ್ಯಾರಡೇ ಮೊದಲಾದ ಭೌತ, ರಾಸಾಯನಿಕ ಶಾಸ್ತ್ರ ಪಂಡಿತರು ತಮ್ಮ ಆತ್ಮ ಬುದ್ಧಿಯು ಪರಿಪಕ್ವವಾದಾಗ ಹೊಸ ಹೊಸ ವಿಷಯಗಳನ್ನು ಕಂಡು ಹಿಡಿದರು. ಆ ಜ್ಞಾನ ಬಲದಿಂದ ನವ ನವೀನ ವಿಷಯಗಳನ್ನು ತಿಳಿಯುವ ಹುಮ್ಮಸ್ಸುಂಟಾಗುವುದು ಸ್ವಾಭಾವಿಕವೂ ಅಹುದು.

ಆತ್ಮ ಬುದ್ಧಿಯು ಪರಿಪಕ್ವವಾಗಲು ಆತ್ಮ ಶಕ್ತಿ, ಮೇಧಾಶಕ್ತಿ, ದೀರ್ಘ ಆಲೋಚನೆಗಳು ಕಾರಣಗಳಾಗಿವೆ ಇದನ್ನು ಕುದುರಿಸಿಕೊಳ್ಳುವ ಮನಸ್ಸು ಮಾಡಬೇಕು. ಇದರಿಂದ ಹೊಸ ಸಂಶೋಧನೆಗಳಿಗೂ ಎಡೆಯಾಗುವುದು. ಹೀಗೆ ಮಾಡುವ ಆಲೋಚನೆ ಉಕ್ಕಿಬರಬೇಕು. ಅದನ್ನು ಕಾರ್ಯಗತ ಮಾಡಿಕೊಳ್ಳುವ ಸಾಹಸವನ್ನು ಮೈಗೂಡಿಸಿಕೊಳ್ಳಬೇಕು.

ಯಾವ ಮನುಷ್ಯನೇ ಆದರೂ ತನ್ನ ಉನ್ನತಿಗೆ ಮಾರ್ಗ ಏನೆಂಬುದನ್ನು ಪರ್ಯಾಲೋಚಿಸಿ, ನಿರ್ಧರಿಸಿ, ಕಾರ್ಯರಂಗಕ್ಕಿಳಿಯಬೇಕು. ಆತ್ಮ ಬುದ್ಧಿ ಇದಕ್ಕೆ ಬೆಂಬಲ ಬರುವುದರಲ್ಲಿ ಸಂಶಯವಿಲ್ಲ.

ಆತ್ಮಬಲವು ಸಂಘಟಿಸುವ ಯಾವ ಮಾರ್ಗವಾದರೂ ಹಿತ ಮಿತ್ರರ, ಹಿತೈಷಿಗಳ ಪ್ರೋತ್ಸಾಹ ಇರಲೇಬೇಕು. ಆಗ ಆತ್ಮಬುದ್ಧಿಗೆ ಸ್ಫೂರ್ತಿಯೊದಗಿ ಬಂದು ಕಾರ್ಯರಂಗಕ್ಕಿಳಿಯುವ ಧೈರ್ಯ ಬರುತ್ತದೆ. ಆಗ ಜಯವು ತಾನೇ ತಾನಾಗಿ ಉಂಟಾಗುವುದರಲ್ಲಿ ಏನೂ ಲೋಪವಿಲ್ಲ. ಹೀಗೆ ಆತ್ಮಬುದ್ಧಿಯ ವಿಕಾಸನದಿಂದ ಚಿರಕೀರ್ತಿ ಏರ್ಪಡುವುದು ಸಹಜವೇ ಆಗಿದೆ.

(ವ್ಯಕ್ತಿ ಚಿತ್ರಣ)

# ರುದ್ರಾಂಬೆ ಪ್ರತೀಕಾರದ ಜೀವಂತ ರಕ್ತಾಕ್ಷಿ

—ಎಸ್. ಕೆ. ಗಿರಿಜಾಂಬ

ಉಪಾಧ್ಯಾಯಿನಿ ಗವರ್ನಮೆಂಟ್ ಜೂನಿಯರ್ ಕಾಲೇಜು, ಮಲ್ಲೇಶ್ವರಂ ಬೆಂಗಳೂರು-3

**ಕುವೆಂಪು ವಿರಚಿತ, 'ರಕ್ತಾಕ್ಷಿ' ಐತಿಹಾಸಿಕ ನಾಟಕದಲ್ಲಿ ಬರುವ ಪ್ರಮುಖ ಸ್ತ್ರೀ ಪಾತ್ರ—ರುದ್ರಾಂಬೆ.**

ಹದಿನಾರರ ಹರೆಯದ ಚೆಲುವೆ ರುದ್ರಾಂಬೆಯು ಬಿದನೂರು ಸಂಸ್ಥಾನದ ಮುಖ್ಯಮಂತ್ರಿ ಲಿಂಗಣ್ಣನ ಏಕಮಾತ್ರ ಪುತ್ರಿ ಕೋಮಲೆಯಾದರೂ ಸಬಲೆ. ಸ್ತ್ರೀ ಸಹಜ ಸೌಂದರ್ಯದಂತರಾಳದಲ್ಲಿ ಸಮಯೋಚಿತವಾಗಿ ಹೊರಹೊಮ್ಮುವ ಪೌರುಷಯುಕ್ತ ರೌದ್ರವುಳ್ಳ ಅಸಾಧಾರಣ ಯುವತಿ. ಪ್ರತಿಕೂಲ ಪರಿಸ್ಥಿತಿಯನ್ನು ದಿಟ್ಟತನದಿಂದೆದುರಿಸಬಲ್ಲ ವೀರಾಂಗನೆ. ಮಿಂಚಿನಂತೆ ಮನೋಹರವಾದಂತಹ ಈ ಚತುರೆಯು ಬಿದನೂರಿನ ಯುವರಾಜ ಬಸವಯ್ಯನ ಮನದನ್ನೆಯೂ ಹೌದು.

ತಬ್ಬಲಿ, ರಾಜಕುಮಾರನ ಆದರ್ಶ ಪ್ರೇಮಿಯಾಗಿ, ಹಿತಚಿಂತಕಳಾಗಿ, ತನ್ನ ಪ್ರೇಮಮಯ ಸುಂದರ ಸಾನ್ನಿಧ್ಯದಿಂದ, ಮೆಚ್ಚುಗೆಯ ನಡೆನುಡಿಯಿಂದ ಅವನಳಲ ನೀಗಿಸಿ, ಕಡೆಗೆ ತನ್ನಿನಿಯನ ಬಯಕೆಯನ್ನೀಡೇರಿಸಲು ರಕ್ತಾಕ್ಷಿಯಾಗಿ, ರಣಚಂಡಿಯಾಗಿ, ರೌದ್ರಾವತಾರದಿಂ ಹಗೆಗಳ ಮಾರಣ ಹೋಮವ ಮಾಡಿ ಮಡಿದಳಾ ಮಹಾಕಾಳಿ ರುದ್ರಾಂಬೆ !

ತಂದೆಯ ದುರ್ಮರಣ, ಮಲತಾಯಿಯ ನೀತಿಗೆಟ್ಟ ನಡತೆ, ರಾಜ್ಯಶ್ರೀಯು ರಾಜದ್ರೋಹಿ ನಿಂಬಯ್ಯನ ಕೈಸೇರುವಿಕೆ—ಇವುಗಳಿಂದಾಗಿ, ಬಸವಯ್ಯನಿಗೆ ಜೀವನವೇ ಮರುಭೂಮಿಯಂತಾದಾಗ ರುದ್ರಾಂಬೆಯು ಅತನಿಗೆ ಮರುವನ ವಾಗಿ ಬಂದಳು; ನಿಶ್ಚೇಷ್ಟಿತವಾದ ಅವನ ಬರಡು ಜೀವನಕ್ಕೆ ಚೈತನ್ಯದಾತೆಯಾಗಿಯೂ ಜೀವರಸವಾಹಿನಿಯಾಗಿಯೂ ಇದ್ದಳು. ಬಸವಯ್ಯನ ಮೇಲಿನ ಅವಳ ನಿಷ್ಕಲ್ಮಶ ಪ್ರೇಮವು ಮಾದಕವೋ, ಮಾರಕವೋ ಆಗದೆ, ಪೂರಕವಾಗಿದ್ದಿತು. ಬಸವಯ್ಯನು ತನ್ನ ದುಗುಡದ ಹೊರೆಯನ್ನು ಅವಳ ಮೇಲೇರಲು ಇಚ್ಛಿಸದಿರಲು, ಅವನ ನೊಂದೆದೆಯನಿಂತು ಸಂತೈಸುವಳು, "ಹಾಗೆನ್ನದಿರು, ಇನಿಯ. ಸುಖದಲ್ಲಿ ಅರಪಾಲನೆಳಸುತಿಹ ನಾನು ನಿನ್ನಳಲಿನಲಿ ಅರೆಪಾಲನಾನಂದದಿಂದೇ ಬಯಸುತಿಹೆನು." ಹೀಗೆ ತನ್ನ ಒಲ್ಮೆ ನಲ್ಮೆಗಳಿಂದ ಬಸವಯ್ಯನ ಮನವನ್ನು ಸೂರೆಗೊಂಡಿದ್ದ ಆ ಚೆಲುವೆ ರುದ್ರಾಂಬೆಯು ಸಂಸಾರ ಸಾಗರದ ಬವಣೆ ಬೇನೆಗಳೆಂಬ ಅಲೆಗಳಿಗೆ ಕುತ್ತಾಗಿ ತೇಲುತ್ತಿದ್ದ ಅವನಿಗೆ ಶಾಶ್ವತ ಧ್ರುವತಾರೆಯಂತಿದ್ದಳು.

ಇಲ್ಲಿಯವರೆಗೆ ನಾವು ಮನಗಾಣುವುದು ರುದ್ರಾಂಬೆಯ ಮುಗ್ಧ ಮನೋಹರ ಪ್ರಶಾಂತ ಮುಖ. ಇನ್ನು ಮುಂದೆ ಅವಳು ಪ್ರತೀಕಾರದ ರಕ್ತಾಕ್ಷಿ ಹೇಗಾಗುತ್ತಾಳೆ ಮತ್ತು ಏಕೆ? ಎಂಬುದನ್ನು ಗಮನಿಸೋಣ.

ಚೆಲುವಾಂಬೆ, ನಿಂಬಯ್ಯರು (ಬಸವಯ್ಯನ ಮಲತಾಯಿ ಮತ್ತು ಬಿದನೂರಿನ ಸೇನಾಪತಿ) ತಮ್ಮ ಪ್ರಣಯ ವ್ಯವಹಾರವನ್ನು ಯಾವ ಅಡೆತಡೆಯೂ ಇಲ್ಲದೆ ಸಾಗಿಸಲು ರಾಜನನ್ನು ಔಷಧದ ನೆವದಿಂದ ವಿಷವನ್ನು ಕುಡಿಸಿ ಕೊಲ್ಲಿಸುತ್ತಾರೆ. ತನ್ನಿನಿಯನ ಪಿತನು ಈ ರೀತಿ ರಹಸ್ಯ ಪ್ರೇಮಿಗಳ ಸ್ವಾರ್ಥ ಸಾಧನೆಗೆ ಆಹುತಿಯಾದ ದಾರುಣ ಕಥೆಯನ್ನು ಕೇಳಿದಾಗ ಅವಳಲ್ಲಿ ಅವರ ಬಗೆಗೆ ತಿರಸ್ಕಾರ ಮನೋಭಾವವುಂಟಾಗುತ್ತದೆ. ಆಗ ತನ್ನ ತಂದೆಯ ಬಳಿ ರಾಣಿಯ ಬಗ್ಗೆ ತನ್ನ ಬೇಸರವನ್ನು ಈ ರೀತಿ ವ್ಯಕ್ತಪಡಿಸುತ್ತಾಳೆ, 'ಅಯ್ಯೋ ಪಾಪಿಷ್ಠೆ! ನರಕವಿಂತುಟು ನಾಕವೇಷದಲಿ ಬಹುದೆಂದು ನಾನರಿದುದಿಲ್ಲ.'

ಮುಂದೆ ತನ್ನಿನಿಯನ ಮತ್ತು ತಂದೆಯ ಮೇಲೆ ರಾಜದ್ರೋಹಿಗಳೆಂಬ ಆರೋಪ ಹೊರಿಸಿ, ಸೆರೆಹಿಡಿಸಿದಾಗ, ಚೆಲುವಾಂಬೆ ನಿಂಬಯ್ಯರ ಬಗ್ಗೆ ರುದ್ರಾಂಬೆಗೆ ದ್ವೇಷವುಂಟಾಗುತ್ತದೆ. ಅವರಿಬ್ಬರ ಸಂಚು ಅವಳ ತಿಳಿಯಾದ ಮನಸ್ಸೆಂಬ ಸರೋವರವನ್ನು ಕದಡಿ, ಅಲ್ಲಿ ಅಶಾಂತಿಯ ಅಲೆಯನ್ನೆಬ್ಬಿಸುತ್ತದೆ. ಆತ್ಮೀಯರ ಅಗಲಿಕೆಯಿಂದಾಗಿ ಅಪಾರ ನೋವನ್ನನುಭವಿಸುತ್ತಾಳೆ, "ಅಯ್ಯೋ ತಂದೆಯೇ, ಗಂಡಾಗಿ ಸಂಭವಿಸಬಾರದಾಗಿತ್ತೆ ನಾನು!" ಎಂಬುದಾಗಿ ಅವಳ ಪ್ರೇಮಯಾಚನೆಗಾಗಿ ಬಂದ ಶಿವಯ್ಯನೊಂದಿಗೆ ತನ್ನಳಲ ತೋಡಿಕೊಳ್ಳುತ್ತಾಳೆ. ಇಲ್ಲಿ ನಮಗೆ ಅವಳ ಕ್ಷಾತ್ರ ಮನೋಧರ್ಮದ ಅರಿವಾಗುತ್ತದೆ.

ರುದ್ರಾಂಬೆಯ ಪಿತೃಭಕ್ತಿ ಮತ್ತು ಬಸವಯ್ಯನಲ್ಲಿಟ್ಟಿದ್ದ ಅವಳ ಸದೃಢ ಪ್ರೇಮ—ಇವುಗಳು ಅವಳನ್ನು ಶಿವಯ್ಯನ ಬಳಿ ಸುಳ್ಳು ಹೇಳಲು ಪ್ರೇರೇಪಿಸುತ್ತವೆ. ಆದರೆ, 'ಬಾಂಧವರ ಜೀವನವನ್ನು ಉಳಿಸಿಕೊಳ್ಳುವ ಸುಳ್ಳು ಪಾಪವಾಗದು' ಎಂದು ಸ್ವಗತಿಸಿ, ತಾನು ಶಿವಯ್ಯನನ್ನು ಪ್ರೀತಿಸುವಂತೆ ನಟಿಸಿ, ಅವರ ಬಿಡುಗಡೆಯನ್ನು ಸಾಧಿಸುತ್ತಾಳೆ. ಈ ಸಂದರ್ಭ ಅವಳ ರಾಜನೀತಿ ನೈಪುಣ್ಯತೆಯನ್ನು ತೋರಿಸುತ್ತದೆ.

ಅಲ್ಲಲ್ಲಿ ಪುರಜನರು ಸತ್ಯಾಂಶವನ್ನು ತಿಳಿದು ದಂಗೆ ಏಳತೊಡಗುತ್ತಾರೆ ರುದ್ರಾಂಬೆಯು ವಿಕಾರವಾದ ಛದ್ಮ ವೇಷವನ್ನು ಧರಿಸಿ ಊರಿನಲ್ಲೆಲ್ಲಾ ಅಲೆಯುತ್ತಾಳೆ. ಮುಡಿಗೆದರಿ ರಣಚಂಡಿಯಂತೆ ನಿಂತು ಹುಚ್ಚುಹುಚ್ಚಾಗಿ, '.ನರಕ! ನರಕ!! ಅಯ್ಯೋ ನರಕ !!! ನನ್ನೂರು ನರಕ! ನನ್ನೂರು ನರಕ!!! ಯಮನಿಗೆ

ಸಾಕ್ಷಿ! ನಾನು ರಕ್ತಾಕ್ಷಿ!! ಬನ್ನಿ! ಬನ್ನಿ! ಎಲ್ಲರೂ ಬನ್ನಿ! ನರಕದಲಿ ದಂಗೆ! ಓ ಪಾಪಿಗಳೆ ಏಳಿ, ಎದ್ದೇಳಿ! ಯಮದೂತರನ್ನು ಸೀಳಿ!'' ಎಂದೆಲ್ಲಾ ಅರ್ಭಟಿಸುತ್ತಾ ಒಮ್ಮೆ ನಕ್ಕು, ಒಮ್ಮೆ ಅತ್ತು, ಒದೆದು, ಕುಣಿದು, ಹಾರಾಡಿ, ಮತ್ತೊಮ್ಮೆ ರೌದ್ರವ ತಾಳಿ, ಬಿದ್ದು ರೋಧಿಸಿ, ಹೊರಳಿ, ಎದ್ದು-ಓಡಾಡುತ್ತಾ ಜನರಲ್ಲಿ ರಾಜನೀತಿಯನ್ನು ಬೋಧಿಸಿ, ಅವರನ್ನು ಎಚ್ಚೆತ್ತು ದಂಗೆ ಏಳಿರೆಂದು ಹುರಿದುಂಬಿಸಿ, ಜಾಗೃತಗೊಳಿಸುತ್ತಾಳೆ.

ಅದರೇನಾಯಿತು! ರುದ್ರಾಂಬೆಯು ಹೊಂಗನಸೆಲ್ಲ ಹುಡಿಯಾಯ್ತು! ಅವಳ ಸಕಲ ಸೌಭಾಗ್ಯವೆಲ್ಲ ಕಾಮನ ಬಿಲ್ಲಿನಂತೆ ಕರಗಿ ಕಣ್ಮರೆಯಾಯ್ತು! ನಿಂಬಯ್ಯನ ಮಗ ಸೋಮಯ್ಯನ ಮಿತ್ರ ಸ್ವಾರ್ಥಿ ಶಿವಯ್ಯನು ರುದ್ರಾಂಬೆಯ ಕೈಹಿಡಿಯಬೇಕೆಂಬ ದುರಾಸೆಯಿಂದ ಬಸವಯ್ಯನನ್ನು ವಂಚಿಸಿ, ಕೊಲೆಗೈದು ಹೈದರಾಲಿಯಿಂದ ಸೆರೆಹಿಡಿಯಲ್ಪಡುತ್ತಾನೆ.

ಇತ್ತ ಬಸವಯ್ಯನ ಮಿತ್ರ ಹೊನ್ನಯ್ಯನ ಶವಸಂಸ್ಕಾರ ಮಾಡಲೋಸುಗ ತಾನೇ ಕೊಲೆಗಾರನೆಂದು ಸುದ್ದಿ ಹರಡಿದ ರಾತ್ರಿ, ರುದ್ರಾಂಬೆಯ ಪಾಲಿಗೆ ಕಾಳರಾತ್ರಿಯಾಗುತ್ತದೆ. ಅವಳಿಗೆ ಆ ಕ್ಷಣವೇ ರೋಷವುಕ್ಕೇರಿ, ಕಾಳಿಯಾಗುತ್ತಾಳೆ ಅವಳ ಕ್ರೋಧ ವಿಸ್ಫಾರಿತ ನೇತ್ರಗಳು ರಕ್ತಾಕ್ತವಾಗಿ ರಕ್ತ ತೃಷ್ಣಾ ಪೂರ್ಣವಾಗಿ ಭೀಷಣವಾಗುತ್ತವೆ. ಅವಳ ಹೃದಯದಲ್ಲಿ ಕ್ರೋಧ ದುಃಖಗಳ ಖಡ್ಗಾಖಡ್ಗಿಯಾಗುತ್ತದೆ. ಇನಿಯನನ್ನು ಕಳೆದುಕೊಂಡ ಅವಳ ಶೂನ್ಯ ಹೃದಯವನ್ನು ತುಂಬಲು ಪರ್ವತಾರಣ್ಯಗಳಾಗಲೀ, ಗಗನಸಾಗರಗಳಾಗಲೀ, ಸೂರ್ಯ ಚಂದ್ರ ತಾರೆಗಳಾಗಲೀ ಏಕೆ, ಇಡೀ ಬ್ರಹ್ಮಾಂಡವೇ ಸಾಲದೆಂಬಂತಾಗುತ್ತದೆ. ಅದೆಂತಹ ಹೃದಯ ವಿದ್ರಾವಕ ನೋಟ! ವಿಕಾರವಾಗಿ ಮುಡಿಗೆದರಿ, "ನಕ್ಷತ್ರಗಳ ಕಾಂತಿಯ ಕಣ್ಣು ಸಿಡಿದೊಡೆದು ಹೋಲಿಸಿ, ನನ್ನ ಬಾಳಿನ ಸೆಚ್ಚು ಹುಟ್ಟಳಿದು ಹೋದಂತೆ" ಎನ್ನುತ್ತಾಳೆ.

ಹೊನ್ನಯ್ಯನೇ ಕೊಲೆಗಾರನೆಂದು ನಂಬಿ, "ಓ ನನ್ನ ಬಸವಯ್ಯ' ನಿನ್ನ ಕೊಲೆಯಿಂದಾಯ್ತೆ ? ಅಯ್ಯೋ . ನನ್ನೋಲಿದುದಕೆ ! ರುದ್ರಾಂಬೆಯಲ್ಲಟಹ ರಕ್ತಾಕ್ಷಿ ನಾನು ! ಹೊನ್ನಯ್ಯ, ಕೊಂದು, ಹೆಣವನು ತಂದು, ಮಸಣದಲಿ ಸಂಸ್ಕಾರವೆಸಗುವಂತೆ ಅಭಿನಯಿಸುತಿಹೆಯಾ ? ಆ ಮಸಣದಿಂದ ನೀ ಮರಳಲಾರೆ ! ನಾನು ರಕ್ತಾಕ್ಷಿ ಆಹುದಾದರೆ ನೀ ಮರಳಲಾರೆ ! ನಿನ್ನ ರಕ್ತವನ್ನು ಚೆಲ್ಲಿ ತಣಿಸುವೆನು ನನ್ನಿನಿಯನಾತ್ಮವನು !"—ಎಂದು ರೋಧಿಸುತ್ತಾ ನೇರವಾಗಿ ಹಾರಿಹೋಗಿ ಹೊನ್ನಯ್ಯನನ್ನು ಕಠಾರಿಯಿಂದಿರಿದು, "ಓ ಎನ್ನಿನಿಯ! ನಿನ್ನ ನಿಂದವನ ಬಿಸುನೆತ್ತರಲಿ ನಾದಿಪೆನು ನಿನ್ನೀ ಸಮಾಧಿಯನು !" ಎಂದು ನಿಟ್ಟುಸಿರಿಡುತ್ತಾಳೆ. ಯುಕ್ತಾ-ಯುಕ್ತ

ವಿವೇಚಿಸದೆ, ತನ್ನ ಸೋದರ ಸಮಾನನಾದ ಹೊನ್ನಯ್ಯನನ್ನು ಕೊಂದುದಕ್ಕಾಗಿ ತಾನು ನಾಯಲೆಣಿಸುತ್ತಾಳೆ. ಆದರೆ ಹೊನ್ನಯ್ಯನು ಹೃದಯದ ಧಾಳಿಯನ್ನು ತಿಳಿಸಿ, "ನಿಂಬಯ್ಯ ಚೆಲುವಾಂಬೆಯರು ತಪ್ಪಿಹೋಗದವೊಲೆಸಗು! ನಿನ್ನಿಯನನು ಕೊಂದಾ ಶಿವಯ್ಯನನ್ನು ಸಂಹರಿಸು! ಬಸವಾಜ್ಞೆಯಿದು! ಮಾಡಿ ಮಡಿ!" ಎಂದರುಹಿ ಅಸು ನೀಗುತ್ತಾನೆ. ಆಗ 'ಅಣ್ಣ, ನಾನೆಂತಹ ಘೋರಕ್ಕೆ ಕೈಯಿಟ್ಟೆ! ಎಂದು ಮರು ಗುತ್ತಾಳೆ ಈ ಆಕಸ್ಮಿಕ ಘಟನೆಯು ಅವಳ ಪ್ರತೀಕಾರ ಮನೋಭಾವವನ್ನು ಪರಾಕಾಷ್ಠೆಗೆ ಮುಟ್ಟಿಸುತ್ತದೆ.

ತನ್ನಿನಿಯನಾಣತಿಯ ಕೈಗೂಡಿಸಲು ಮಹಾರುದ್ರೆಯಾಗಿ, ಕಾಳಕೂಟವ ಕುಡಿದ ಶಿವನನ್ನು ಅವಳೆದೆಯ ಕೋಮಲತೆಯನ್ನು ದಹಿಸುವಂತೆ ಪ್ರಾರ್ಥಿಸಿ, ಪ್ರಲಯ ಗೈವ ಮಹಾಭೈರವನನ್ನು ಅವಳಲ್ಲಿ ಆವಿರ್ಭವಿಸುವಂತೆ ಬೇಡಿ, ಚೆಲು ವಾಂಬೆ ನಿಂಬಯ್ಯರನ್ನು ಅವರವರ ಮನೆಯಲ್ಲೇ ಬಂಧಿಸುತ್ತಾಳೆ. ತಮ್ಮ ಗುಟ್ಟು ರಟ್ಟಾಯಿತೆಂದು ಮನದಟ್ಟಾದ ಚೆಲುವಾಂಬೆಯು ರುದ್ರಾಂಬೆಯನ್ನು ನಿಜವಾದ ಹುಚ್ಚಿಯಲ್ಲವೆಂದಾಗ, ಅವಳು ಅವರೊಡನೆ ವಾದಿಸುತ್ತಾ, ನಾನು ಹುಸಿ ಹುಚ್ಚಿ ಯಲ್ಲ! ಹಸಿ ಹುಚ್ಚಿ ರಕ್ತಾಕ್ಷಿ! ನಿಮ್ಮಿಬ್ಬರು ಇಂದು ಈ ಅರಮನೆಯ ಬೆಂಕಿ ಯಲಿ ಬೀಳಲೈತಂದಿರುವ ಯಜ್ಞದೀಕ್ಷಿತೆ' ಎಂದುಸುರಿ ಸೇಡು ತೀರಿಸಿಕೊಳ್ಳುತ್ತಾಳೆ.

ಅಂತ್ಯದಲ್ಲಿ ಶಿವಯ್ಯನನ್ನು ಸೆರೆಬಿಟ್ಟ ಬೀಡಿಗೆ ನುಗ್ಗಿ ಅವನನ್ನು ಕೊಲೆ ಮಾಡಿ, ತಾನು ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಅವಳ ರೌದ್ರ ಸ್ಥಿತಿಯನ್ನು ನೋಡಲಾರದೆ ತಂದೆ ಲಿಂಗಣ್ಣ ಮಂತ್ರಿಯೂ ಹುಚ್ಚನಾಗುತ್ತಾನೆ ಈ ರೀತಿ ತನ್ನಿ ನಿಯನಿ ನರಗಿಣಿಯಾಗಿದ್ದ ಶಾಂತಮೂರ್ತಿ ರುದ್ರಾಂಬೆಯು, ಕೊನೆಗೆ ಪರಿಸ್ಥಿತಿ ಗಳ ವಿಕೋಪಕ್ಕೆ ಬಲಿಯಾಗಿ, ಜ್ವಾಲಾಮುಖಿಯ ದಾವಾನಲವಾಗಿ ಪ್ರತೀಕಾರ ವನ್ನರಸುತ್ತ, ವಿರಹಿಣಿಯಾಗಿ ಹಲವು ಜೀವರಾಶಿಗಳನಾಹುತಿ ತೆಗೆದುಕೊಂಡ ಜೀವಂತ ರಕ್ತಾಕ್ಷಿಯಾಗಿ ಮರೆಯಾಗುತ್ತಾಳೆ.

---

ಹಿತವಿದೆ ಸಕಲ ಲೋಕದ ಜನಕ್ಕೆ ಮತವಿದೆ. ಶ್ರುತಿ ಪುರಾಣದ ಗತಿ ಇದೆ. ಭಕುತಿಯ ಬೆಳಗಿನುನ್ನತಿ ಇದೆ. ಶ್ರೀ ವಿಭೂತಿಯನೊಲಿದು ಧರಿಸಿರೇ. ಭವವನು ಪರಿವುದು, ದುರಿತ ಸಂಕುಲವನೊರಸುವುದು, ಹರನ ಸಾಲೋಕ್ಯ, ಸಾಮೀಪ್ಯದಲ್ಲಿರಿಸುವುದು. ನಿರುತವಿದನೇ ನಂಬು ಮನುಜಾ. ಜವನ ಭೀತಿ, ಮರಣಭಯದಿಂದ ಈ ವಿಭೂತಿಯ ಅಗಸ್ತ್ಯ, ಕಶ್ಯಪ, ಜಮದಗ್ನಿಗಳು ಧರಿಸುವರು ನೋಡಾ ಶ್ರೀಶೈಲ ಚನ್ನಮಲ್ಲಿಕಾರ್ಜುನನೆದಲಿಸುವ ಶ್ರೀ ವಿಭೂತಿ.

— ಮಹಾದೇವಿಯಕ್ಕ

# ಅಂಚೆ ಚೀಟಿಯ ಜನಕ ಸರ್ ರೋಲಂಡ್ ಹಿಲ್

—ಪ. ರಾಮಕೃಷ್ಣ ಶಾಸ್ತ್ರಿ

"ಶಿವಶಕ್ತಿ ನಿಲಯ" ಅಂಚೆ: ಮಚ್ಚಿನ–574295 (ದ. ಕ)

ಅತ್ಯಂತ ಆಕರ್ಷಕವಾದ ಅಂಚೆ ಚೀಟಿಗಳನ್ನು ಸಂಗ್ರಹಿಸುವ ಹವ್ಯಾಸ ಪ್ರಪಂಚದಾದ್ಯಂತ ಯಾರನ್ನೂ ಬಿಟ್ಟಿಲ್ಲ. ಆದರೆ ಈ ಚೀಟಿಗಳು ಹುಟ್ಟುವ ಬಗೆಗೆ ತಳಹದಿ ಹಾಕಿ, ಅದನ್ನು ಜಗತ್ತಿಗೆ ಒದಗಿಸಲು ಕಾರಣ ಯಾರು ಎಂಬುದು ಅನೇಕರಿಗೆ ತಿಳಿದಿರಲಾರದು. ಅವನು ಸರ್ ರೋಲೆಂಡ್ ಹಿಲ್. ೧೮೭೯ ರ ಆಗಸ್ಟ್ ೨೭ ರಂದು ಈ ಮಹಾವ್ಯಕ್ತಿಯ ಮರಣ ಶತಾಬ್ದಿ ಸಂದರ್ಭದಲ್ಲಿ ಅವನ ಗೌರವಾರ್ಥ ಅಂಚೆ ಚೀಟಿಗಳನ್ನು ಪ್ರಕಟಿಸಿದ ದೇಶಗಳಲ್ಲಿ ಭಾರತವೂ ಸೇರಿದೆ. ಅವನ ಗೌರವಕ್ಕೆ ಎಲ್ಲಾ ದೇಶಗಳಲ್ಲೂ ಇದಕ್ಕಿಂತ ಸದುಪಾಯ ಇನ್ನೊಂದಿಲ್ಲವಷ್ಟೆ?

೧೭೯೫ರ ಡಿಸೆಂಬರ್ ೩ ರಂದು ಇಂಗ್ಲೆಂಡಿನ ಕಿಡ್ಡರ್ ಮಿನ್‌ಸ್ಟರ್‌ನಲ್ಲಿ ಶಾಲಾ ಶಿಕ್ಷಕನೊಬ್ಬನ ಮಗನಾಗಿ ರೋಲಂಡ್ ಹಿಲ್ ಜನಿಸಿದ. ಮುಂದೆ ಅವನು ಕೂಡ ತಂದೆಯಂತೆಯೇ ಶಿಕ್ಷಕನಾದ. ಹೆಜೆಲ್‌ವುಡ್‌ನಲ್ಲಿ ತಾನೇ ಶಾಲೆಯೊಂದನ್ನು ಕಟ್ಟಿ ೧೮೧೯ ರಿಂದ ೧೮ ವರ್ಷಗಳ ಕಾಲ ಶಿಕ್ಷಕನಾಗಿ ದುಡಿದ. ಬಾಲ್ಯದಲ್ಲೇ ಅವನು ತುಂಬ ಬುದ್ಧಿವಂತನೂ ವಿಚಾರವಾದಿಯೂ ಆಗಿದ್ದ. ಗಣಿತ, ಜ್ಯೋತಿಷ್ಯ ಮುದ್ರಣಕಲೆ ಮೊದಲಾದ ವಿಚಾರಗಳಲ್ಲಿ ಪರಿಶ್ರಮ ಹೊಂದಿದ್ದ. ಶಿಕ್ಷಕ ವೃತ್ತಿಗೆ ಕಲಿಸಿದ ಮೇಲೆ ರಾಬರ್ಟ್ ಓವೆನ್ಸ್‌ನ ತತ್ವಗಳಂತೆ ಸ್ವರಾಜ್ಯಾಧಿಕಾರದಿಂದ ಸಮಾಜ ಸುಧಾರಣೆ ಮಾಡಬೇಕೆಂಬುದು. ರೋಲಂಡ್‌ಹಿಲ್‌ನ ಮಹತ್ವಾಕಾಂಕ್ಷೆಗಳಲ್ಲಿ ಒಂದೆನಿಸಿತ್ತು. ಆತ ಅಂದಿನ ಹಲವಾರು ವಿಚಾರಗಳನ್ನು ವಿಶ್ಲೇಷಿಸಿ, ಇಂಗ್ಲೆಂಡಿನಲ್ಲಿ ಅತ್ಯಧಿಕ ಕರಭಾರವಿದ್ದರೂ ದೇಶದ ಆದಾಯ ಕೆಳಸ್ತರದಲ್ಲಿದೆ ಎಂದು ೧೮೩೫ ರಲ್ಲಿ ಸರಕಾರದ ಗಮನ ಸೆಳೆದಿದ್ದ.

ಆಗಿನ ರೂಢಿಯಲ್ಲಿದ್ದ ಅಂಚೆ ವ್ಯವಸ್ಥೆ ಜನ ಸಾಮಾನ್ಯರಿಗೆ ಸಾರ್ಥಕ ಸೇವೆ ನೀಡುವಲ್ಲಿ ಅಸಮರ್ಪಕವಾಗಿದೆ ಎಂಬುದನ್ನು ರೋಲಂಡ್ ಗಮನಿಸಿದ. ಏಕೆಂದರೆ ಒಂದು ಪತ್ರ ಹೋಗಬೇಕಾದ ದೂರದ ಮೇಲೆ ಅಂಚೆ ದರವನ್ನು ನಿಗದಿಗೊಳಿಸುತ್ತಿದ್ದುದರಿಂದ ಬಡ ಜನರು ಅದರ ಬಳಕೆಗೆ ಹಿಂಜರಿಯಬೇಕಾಗಿತ್ತು. ಅಲ್ಲದೆ ಪತ್ರ ಬರೆಯುವ ವ್ಯಕ್ತಿ ಈ ದರ ಕೊಡಬೇಕಾಗಿರಲಿಲ್ಲ. ಅದನ್ನು ಕೇಳುತ್ತಿದ್ದುದು ಪತ್ರದ ವಿಳಾಸದಾರರಿಂದ. ಅಂಚೆಯಾಳುಗಳು ಕುದುರೆಯ ಮೇಲೇರಿ ಈ ಪತ್ರಗಳನ್ನು ಒಯ್ಯು

# ನಮ್ಮ ಸಾಧನೆಯ ಸ್ಮರಣೆಯ

## ಕನ್ನಡ ರಾಜ್ಯೋತ್ಸವ

* ದುರ್ಬಲ ವರ್ಗಗಳ ಏಳಿಗೆಗಾಗಿ ವಿನೂತನ ಯೋಜನೆಗಳು
* ಬರದ ವಿರುದ್ಧ ಸಮರ
* ಹಳ್ಳಿಹಳ್ಳಿಗೂ ಅಧಿಕಾರ ವಿಕೇಂದ್ರೀಕರಣ

ಕರ್ನಾಟಕ ಸರ್ಕಾರಕ್ಕೆ ತನ್ನ ಹೊಣೆಗಾರಿಕೆಯ ಬಗ್ಗೆ ಸಂಪೂರ್ಣ ಅರಿವಿದೆ. ತನ್ನನ್ನು ಆರಿಸಿದ ಜನಕೋಟಿಯ ಅಭಿಪ್ರಾಯಕ್ಕೆ ಸರ್ಕಾರ ಬದ್ಧವಾಗಿದೆ. ಜನತೆಗಾಗಿ ಸರ್ಕಾರ ಏನೆಲ್ಲ ಮಾಡಿದೆ, ಮಾಡುತ್ತಿದೆ ಎಂಬುದನ್ನು ಅರಿಯುವ ಹಕ್ಕು ಅವರಿಗಿದೆ. ಈ ಮಾಹಿತಿಯನ್ನು ಜನರಿಗೆ ತಿಳಿಯಪಡಿಸುವುದು ಸರ್ಕಾರದ ಕರ್ತವ್ಯ. ಈ ಪರಸ್ಪರ ಅರಿವಿನಿಂದ ಮಾತ್ರ ಸರ್ಕಾರ ಮತ್ತು ಜನತೆಯ ನಡುವೆ ಸೌಹಾರ್ದಯುತ ಸಂಬಂಧ ಬೆಳೆಯಲು ಸಾಧ್ಯ.

ನಿಮಗೆಲ್ಲ ತಿಳಿದಿರುವಂತೆ ನಮ್ಮ ರಾಜ್ಯ ಕಳೆದ ನಾಲ್ಕು ವರ್ಷಗಳಿಂದ ಸತತವಾಗಿ ಹಿಂದೆಂದೂ ಕಂಡರಿಯದ ಭೀಕರ ಬರಗಾಲವನ್ನೆದುರಿಸಬೇಕಾಯಿತು. ಪ್ರಕೃತಿ ವಿಕೋಪದ ಈ ದುರ್ಭರ ಸನ್ನಿವೇಶದಲ್ಲೂ ಸರ್ಕಾರದ ಸಾಧನೆ ಕಣ್ಣಿಗೆ ಕಾಣುವಂತಹುದು. ಕರ್ನಾಟಕ ಒಂದು ರಾಜ್ಯವಾಗಿ ರೂಪುಗೊಂಡು ಮೂವತ್ತು ಸಂವತ್ಸರಗಳು ಸಂದಿವೆ. ಈ ಸಂದರ್ಭದಲ್ಲಿ ಜನತೆಯ ಆಶೋತ್ತರಗಳನ್ನು ಈಡೇರಿಸಲು ಸರ್ಕಾರ ಅನುಷ್ಠಾನಗೊಳಿಸಿರುವ ಯೋಜನೆಗಳ ಹಲವು ವಿವರಗಳನ್ನು ಜನತೆಯ ಮುಂದಿಡಲು ಹೆಮ್ಮೆ ಎನಿಸುತ್ತದೆ.

ಸಮಾಜದ ಹಿಂದುಳಿದ ವರ್ಗ ಮತ್ತು ಕಡುಬಡವರನ್ನು ಬಡತನದ ರೇಖೆಯಿಂದ ಮೇಲೆತ್ತಿ ಅವರ ಜೀವನ ಸುಧಾರಣೆಗಾಗಿ ಕಳೆದ ಮೂರು ವರ್ಷಗಳಲ್ಲಿ ಕರ್ನಾಟಕ ಸರಕಾರ ಕೈಗೊಂಡಿರುವ ಕಾರ್ಯಕ್ರಮಗಳು ರಾಷ್ಟ್ರದಲ್ಲೇ ಮಾದರಿ ಎನಿಸಿವೆ. ಗ್ರಾಮೀಣ ಪ್ರದೇಶಕ್ಕೆ ಕುಡಿಯುವ ನೀರು, ಶಾಲಾ ಮಕ್ಕಳಿಗೆ ಉಚಿತ ಪಠ್ಯ ಪುಸ್ತಕ ಮತ್ತು ಸಮವಸ್ತ್ರ, ಕಡುಬಡವರಿಗೆ ಅತಿ ಕಡಿಮೆ ದರದಲ್ಲಿ ಆಹಾರ ಧಾನ್ಯ ಒದಗಿಸಲು ಹಸಿರು ಕಾರ್ಡು, ಅಸಂಘಟಿತ ಕಾರ್ಮಿಕರು ಅಪಘಾತಕ್ಕೊಳಗಾದರೆ ನೆರವಾಗುವ "ಆಶಾಕಿರಣ" ಕಾರ್ಮಿಕ ಗರ್ಭಿಣಿ ಸ್ತ್ರೀಯರಿಗೆ "ಹೆರಿಗೆ ಭತ್ಯ" ಅನಾಥ ವಿಧವೆಯರಿಗೆ ಮಾಸಾಶನ, ಬಡವರ ಕಡಿಮೆ ಖರ್ಚಿನಲ್ಲಿ ಮದುವೆ ಮಾಡಲು 'ಶಾದೀಭಾಗ್ಯ' ರೈತ ಸಮುದಾಯಕ್ಕೆ ಭಾರೀಪ್ರಮಾಣದ ರಿಯಾಯಿತಿ, ಜನತೆಯ ನಿತ್ಯದ ಬೇಡಿಕೆ ಪೂರೈಸಲು ಸಾಮಾಜಿಕ ಅರಣ್ಯ ಕಾರ್ಯಕ್ರಮ, ಸಣ್ಣ ರೈತರು, ಕೃಷಿ ಕಾರ್ಮಿಕರು ಹಾಗೂ ಕುಶಲ ಕರ್ಮಿಗಳಿಗೆ ಅನುಕೂಲವಾಗುವ ತೀವ್ರ ಗ್ರಾಮೀಣಾಭಿವೃದ್ಧಿ ಕಾರ್ಯ— ಹೀಗೆ ಜನಹಿತ ದೃಷ್ಟಿಯ ಹತ್ತೆಂಟು ಯೋಜನೆಗಳ ಪರಿಣಾಮಕಾರಿ ಅನುಷ್ಠಾನ.

ಇದಲ್ಲದೆ ಅಧಿಕಾರ ವಿಕೇಂದ್ರೀಕರಣದ ಹಾದಿಯಲ್ಲಿ ಹೊಸ ಅಧ್ಯಾಯ ಆರಂಭಿಸಲಿರುವ ಜಿಲ್ಲಾ ಪರಿಷತ್ ಮಸೂದೆಯನ್ನು ಅನುಷ್ಠಾನಗೊಳಿಸಲು ದೃಢ ನಿರ್ಧಾರ ಕೈಗೊಂಡಿರುವ ಕರ್ನಾಟಕ ಸರ್ಕಾರ ಈ ದಿಸೆಯಲ್ಲಿ ದಿಟ್ಟ ಹೆಜ್ಜೆ ಇಟ್ಟಿದೆ. ಇದರಿಂದ ಗ್ರಾಮೀಣ ಜನತೆ ಸ್ಥಳೀಯ ಅಭಿವೃದ್ಧಿ ಕಾರ್ಯಗಳನ್ನು ರೂಪಿಸುವ ಮತ್ತು ಅನುಷ್ಠಾನಗೊಳಿಸುವ ಅಧಿಕಾರ ಪಡೆಯಲಿದೆ.

ಕರ್ನಾಟಕ ಸರ್ಕಾರ

ಪ್ರಜಾಹಿತ ಕಾರ್ಯದ ಪರಂಪರೆಯನ್ನು ಮುಂದುವರಿಸಲು

ಪುನಃ ಮುಡಿಪುಕಟ್ಟುತ್ತದೆ.

ತ್ತಿದ್ದರು. ೧೫ ಮೈಲು ದೂರದಿಂದ ಪತ್ರ ಬಂದಿದ್ದರೆ ೮ ಸೆಂಟ್ ೩೦ ಮೈಲು ದೂರದಿಂದ ಬಂದಿದ್ದರೆ ೨೫ ಸೆಂಟ್ ವಿಳಾಸದಾರ ಕೊಡಬೇಕಾಗಿತ್ತು. ಆತ ಹಣ ಕೊಡದಿದ್ದರೆ ಪತ್ರ ಹಿಂದಕ್ಕೆ ಹೋಗುತ್ತಿತ್ತು.

ಬ್ರಿಟನ್ನಿನ ಒಂದು ಹಳ್ಳಿಯಲ್ಲಿ ಬಡ ವಿಧವೆಯೊಬ್ಬಳಿಗೆ ಒಂದು ಪತ್ರ ಬಂದಿತು. ಅವಳು ಅದನ್ನು ಹಣ ಕೊಟ್ಟು ಸ್ವೀಕರಿಸಲು ಒಪ್ಪದಿದ್ದಾಗ ಒಬ್ಬ ಉದಾರ ವ್ಯಕ್ತಿ ಅವಳ ಪರವಾಗಿ ಹಣ ತೆತ್ತು ಆ ಪತ್ರವನ್ನು ಬಿಡಿಸಿ ಕೊಟ್ಟ. ಆಗ ಆಕೆ ಅವನನ್ನು "ನೀನು ಸುಮ್ಮನೆ ಇದಕ್ಕಾಗಿ ಹಣ ಕೊಟ್ಟೆ" ಎಂದಳು. ಏಕೆಂದರೆ ಆ ಲಕೋಟೆಯೊಳಗೆ ಖಾಲಿ ಕಾಗದ ಮಾತ್ರವಿತ್ತು. ದೂರದ ಊರಿನಲ್ಲಿದ್ದ ಆ ವಿಧವೆಯ ಮಗ ತಾನು ಆಗಾಗ ಖಾಲಿ ಇರುವ ಲಕೋಟೆಯನ್ನು ಕಳುಹಿಸುತ್ತಿದ್ದ. ಹಾಗೆ ಕಳುಹಿಸಿದರೆ ಅವನು ಕ್ಷೇಮವಾಗಿದ್ದಾನೆಂದೂ ಕಳುಹಿಸದಿದ್ದರೆ ಅವನಿಗೇನಾದರೂ ಖಾಯಿಲೆಯಿದೆ ಎಂದು ತಾಯಿ ಭಾವಿಸಬೇಕೆಂದೂ ಮೊದಲೇ ಅವರು ಗುಟ್ಟಾಗಿ ಮಾತನಾಡಿಕೊಂಡಿದ್ದರು. ಆದ್ದರಿಂದ ತಾಯಿ ಈ ರೀತಿ ಮಗನ ಕ್ಷೇಮ ಸಮಾಚಾರ ತಿಳಿದು ಪತ್ರವನ್ನು ಹಿಂದೆ ಬಿಡುತ್ತಿದ್ದಳು. ಆಗ ಅವಳು ಕ್ಷೇಮವಾಗಿದ್ದಾಳೆಂದು ಮಗನಿಗೆ ತಿಳಿಯಲೂ ಸಹಾಯಕವಾಗಿತ್ತು.

ಇದರಿಂದಾಗಿ ಅಂಚೆ ಇಲಾಖೆಗೆ ನಷ್ಟವಾಗುತ್ತಿರುವುದನ್ನು ರೋಲಂಡ್ ಹಿಲ್ ಗಮನಿಸಿ ಸಾರ್ವಜನಿಕರಿಗೆ ಅಂಚೆ ಸೌಲಭ್ಯವನ್ನು ಹೇಗೆ ಉತ್ತಮ ರೀತಿಯಲ್ಲಿ ನೀಡಬಹುದೆಂಬ ಬಗೆಗೆ ೧೮೩೭ ರಲ್ಲಿ ಒಂದು ಪುಸ್ತಕವನ್ನು ಪ್ರಕಟಿಸಿದ. ಅದರಲ್ಲಿ ಎಲ್ಲರಿಗೂ ಅನುಕೂಲವಾಗುವಂತೆ ಅಲ್ಪ ಮತ್ತು ಏಕರೀತಿಯ ದರವಿರಬೇಕೆಂದೂ ಪತ್ರ ಬರೆಯುವವನಿಂದಲೇ ಅಂಚೆದರವನ್ನು ಪಡೆದು ಚೀಟಿಗಳನ್ನು ಅಂಟಿಸುವ ಪದ್ಧತಿ ಇರಬೇಕೆಂದೂ ವಿಸ್ತರಿಸಿದ. ಆದ್ದರಿಂದ ಅಂಚೆದರ ಪಡೆಯಲು ಅಂಚೆಯಾಳು ವಿಳಾಸದಾರನ ಮನೆಯೆದುರು ತಾಸುಗಟ್ಟಲೆ ಕಾಯಬೇಕಾಗಿಲ್ಲ, ಸರಕಾರಕ್ಕೆ ಖರ್ಚು ಕಮ್ಮಿ ಎಂದು ತಿಳಿಸಿದ.

ಪಾರ್ಲಿಮೆಂಟ್ ಸದಸ್ಯ ರಾಬರ್ಟ್ ವ್ಯಾಲೇಸ್ ಎಂಬಾತ ರೋಲಂಡ್‌ನ ಸಲಹೆಗಳನ್ನು ಸರಕಾರದ ಗಮನಕ್ಕೆ ತರಲು ಸಾಕಷ್ಟು ಶ್ರಮಿಸಿದ. ಎರಡು ವರ್ಷಗಳ ಮೇಲೆ ಇವನ್ನೆಲ್ಲ ಅನುಷ್ಠಾನಕ್ಕೆ ತರುವ ಹೊಣೆಯನ್ನು ಸರಕಾರ ರೋಲಂಡ್ ಹಿಲ್‌ನಿಗೆ ವಹಿಸಿಕೊಟ್ಟು ೧೮೪೦ ರಲ್ಲಿ ಒಂದು ಪೆನ್ನಿ ಬೆಲೆಯ ಕನಿಷ್ಠ ಅಂಚೆ ದರವನ್ನು ಜಾರಿಗೆ ತಂದಿತು. ಆದರಿಂದ ಬಡವರಿಗೂ ಪತ್ರ ವ್ಯವಹಾರ ಸಾಧ್ಯವಾಯಿತು.

ಬಳಿಕ ಅಂಚೆ ಚೀಟಿಗಳ ಕಲ್ಪನೆಗೆ ಸಾಕಾರ ನೀಡಲು ಒಂದು ಸಾರ್ವಜನಿಕ ಸ್ಪರ್ಧೆ ಏರ್ಪಡಿಸಿ ಅತ್ಯುತ್ತಮ ವಿನ್ಯಾಸ ನೀಡಿದವರಿಗೆ ರೋಲಂಡ್ ಹಿಲ್ ೨೦೦

ಮತ್ತು ೧೦೦ ಪೌಂಡುಗಳ ಎರಡು ಬಹುಮಾನಗಳನ್ನೀಯುವುದಾಗಿ ಪ್ರಕಟಿಸಿದ. ಇದರಲ್ಲಿ ೨೬೦೦ ಸ್ಪರ್ಧಿಗಳು ಪಾಲುಗೊಂಡರು. ಆದರೆ ಅವರು ನೀಡಿದ ಯಾವ ವಿನ್ಯಾಸವೂ ಅಂಚೆ ಚೀಟಿಗೆ ಸೂಕ್ತ ಎನಿಸಲಿಲ್ಲ. ಕೊನೆಗೆ–ಹಿಲ್ ಹಲವು ಮಂದಿ ಸ್ಪರ್ಧಿಗಳ ವಿನ್ಯಾಸಗಳನ್ನು ಜೋಡಿಸಿ ಅಂಚೆ ಚೀಟಿಗೆ ಸೂಕ್ತವಾದ ವಿನ್ಯಾಸವನ್ನು ತಾನೇ ರೂಪಿಸಿದ.

ಹಿಲ್ ರೂಪಿಸಿದ ವಿನ್ಯಾಸದಲ್ಲಿ ವಿಕ್ಟೋರಿಯ ರಾಣಿಯ ಭುಜದವರೆಗಿನ ಚಿತ್ರ ಇತ್ತು. ಕಪ್ಪುವರ್ಣದ ಒಂದು ಪೆನ್ನಿ ಬೆಲೆಯ ಈ ಪೆನ್ನಿ ಬ್ಲ್ಯಾಕ್ ಚೀಟಿ ಇಂದು ಲಕ್ಷಾಂತರ ರೂಪಾಯಿ ಬೆಲೆ ಬಾಳುತ್ತಿದೆ. ಈ ಮೊತ್ತ ಮೊದಲ ಅಂಚೆ ಚೀಟಿಗೆ 'ಅಂಚೆ ಚೀಟಿ ಪ್ರಪಂಚದ ಮೊನಾಲಿಸಾ' ಎಂದು ಸಂಗ್ರಾಹಕರು ಬಿರುದು ನೀಡಿದ್ದಾರೆ. ಇದು ಸಾರ್ವಜನಿಕ ಬಳಕೆಗಾಗಿ ೧೮೪೦ ರ ಮೇ ೬ ರಂದು ಬಿಡುಗಡೆಯಾಯಿತು. ಈ ಚೀಟಿ ಹಚ್ಚಿದ ಪತ್ರ ಇಂಗ್ಲೆಂಡಿನ ಯಾವ ಮೂಲೆಗಾದರೂ ಹೋಗುತ್ತಿತ್ತು. ಆದರೂ ಆರಂಭದಲ್ಲಿ ಈ ಪದ್ಧತಿಯನ್ನು ಪರಿಹಾಸ್ಯ ಮಾಡಿದವರೇ ಹೆಚ್ಚು.

ಆದರೆ ಅಂಚೆ ಚೀಟಿ ಪದ್ಧತಿ ಬಹುಬೇಗನೆ ಜನಪ್ರಿಯತೆ ಗಳಿಸಿತು. ೧೮೩೯ ರಲ್ಲಿ ಇಂಗ್ಲೆಂಡಿನಲ್ಲಿ ೭೭ ದಶಲಕ್ಷ ಪತ್ರಗಳ ರವಾನೆಯಾಗಿದ್ದರೆ ಕೇವಲ ೨೯ ವರ್ಷಗಳಲ್ಲಿ ಅದು ೯೪೨ ದಶಲಕ್ಷಕ್ಕೆ ತಲುಪಿತೆಂಬುದೇ ಅದರ ಜನಪ್ರಿಯತೆಗೆ ಸಾಕ್ಷಿಯಾಗಿತ್ತು. ಅಂಚೆ ಚೀಟಿಗಳಷ್ಟೇ ಅಲ್ಲ - ಮನಿಯಾರ್ಡರ್, ಬುಕ್ ಪೋಸ್ಟ್ ಮುಂತಾದ ಸೌಲಭ್ಯಗಳನ್ನು ಕೂಡ ರೂಢಿಗೆ ತಂದು ಅಂಚೆ ವ್ಯವಸ್ಥೆಯನ್ನು ಜನಜೀವನದ ಅವಿಭಾಜ್ಯ ಅಂಗವನ್ನಾಗಿಸಿದ ಕೀರ್ತಿಯೂ ಹಿಲ್‌ನಿಗೆ ಸೇರಬೇಕು.

೧೮೪೧ ರಲ್ಲಿ ಕನ್ಸರ್ವೇಟಿವ್ ಪಕ್ಷ ಅಧಿಕಾರಕ್ಕೆ ಬಂದಾಗ ಆರಂಭದಿಂದಲೂ ರೋಲಂಡ್‌ನ ಸುಧಾರಣೆಗಳಿಗೆ ವಿರುದ್ಧವಾಗಿದ್ದ ಅದು ಅವನನ್ನು ಹುದ್ದೆಯಿಂದ ಕೆಳಗಿಳಿಸಿತು ಆದರೂ ಸಾರ್ವಜನಿಕರು ೧೮೪೬ ರಲ್ಲಿ ಅವನಿಗೆ ೧೩ ಸಾವಿರ ಪೌಂಡುಗಳ ನಿಧಿ ಸಮರ್ಪಿಸಿ, ಗೌರವಿಸಲು ಮರೆಯಲಿಲ್ಲ. ಆ ವರ್ಷ ಲಿಬರಲ್ ಪಕ್ಷ ಮತ್ತೆ ಅಧಿಕಾರಕ್ಕೆ ಬಂದಿತು. ಅದು ಪುನಃ ರೋಲಂಡ್‌ನನ್ನು ಸ್ವಾಗತಿಸಿ ಪೋಸ್ಟ್ ಮಾಸ್ಟರ್ ಜನರಲ್‌ನನ್ನಾಗಿ ನೇಮಿಸಿತು. ಆದರೆ ಆತ ಅನಾರೋಗ್ಯದಿಂದಾಗಿ ೧೮೬೪ ರಲ್ಲಿ ಈ ಪದವಿಗೆ ರಾಜೀನಾಮೆ ನೀಡಿದ.

ರೋಲಂಡನಿಗೆ ಸರಕಾರ ೨,೦೦೦ ಪೌಂಡು ನಿವೃತ್ತಿವೇತನ ನೀಡಿತಲ್ಲದೆ ಅವನು ಗೈದ ದೇಶ ಸೇವೆಯನ್ನು ಪಾರ್ಲಿಮೆಂಟ್ ಗುರುತಿಸಿ ೨೦ ಸಾವಿರ ಪೌಂಡುಗಳ ಕಾಣಿಕೆ ನೀಡಿತು. ೧೮೬೦ ರಲ್ಲಿ ಅವನಿಗೆ ಸರ್ ಪದವಿಯನ್ನಿತ್ತು ಗೌರವಿಸಿದರು. ೧೮೭೯

(43ನೇ ಪುಟ ನೋಡಿ)

# ಕೃಷಿ ಅಭಿವೃದ್ಧಿಯಲ್ಲಿ ವಿಜ್ಞಾನ ಮತ್ತು ತಾಂತ್ರಿಕತೆಯ ನೆರವು

ಡಿ. ವೆಂಕಟರಾವ್. ಎಂ. ಎ.

ಪ್ರಾಚಾರ್ಯರು, ಸರಕಾರಿ ಕಾಲೇಜು, ಸಕಲೇಶಪುರ.

ವಿಶ್ವದಲ್ಲಿ ವಿಜ್ಞಾನವು ಸರ್ವತೋಮುಖವಾಗಿದೆ. ವಿಶ್ವದ ಪ್ರತಿಯೊಂದು ಕ್ಷೇತ್ರದಲ್ಲಿಯೂ ವಿಜ್ಞಾನದ ನೆರವನ್ನು ಪಡೆಯಲಾಗುತ್ತಿದೆ. ಇಂದು ಮಾನವನು ವಿಜ್ಞಾನದ ಮೇಲೆ ಸಂಪೂರ್ಣ ಪ್ರಭುತ್ವವನ್ನು ಸ್ಥಾಪಿಸಿದ್ದಾನೆ, ಪ್ರಕೃತಿಯ ಮೇಲೆ ವಿಜಯ ಪತಾಕೆಯನ್ನು ಹಾರಿಸಿದ್ದಾನೆ, ಇಂದು ಯಂತ್ರ ಶಕ್ತಿ ಮಾನವನ ಗುಲಾಮನಾಗಿದೆ. ಮಾನವ ಲೋಕಕ್ಕೆ ಇಂದು ವಿಜ್ಞಾನದಿಂದಾಗುತ್ತಿರುವ ಅನುಕೂಲ, ಲಾಭಗಳು ಅನಂತವಾದವು.

ಕೆಲವು ವರ್ಷಗಳಿಂದ ಜನರ ಆರೋಗ್ಯಸ್ಥಿತಿಯನ್ನು ಸುಧಾರಿಸಲು ವಿಜ್ಞಾನವನ್ನು ಬಳಸಲಾಯಿತು, ಇದರಿಂದ ಮಾನವನ ಆಯುಃ ಪ್ರಮಾಣವು 42 ವರ್ಷಗಳಿಂದ 52 ವರ್ಷಗಳಿಗೆ ಹೆಚ್ಚಿತು. ಅಲ್ಪ ಕಾಲದಲ್ಲಿ ಸಾಧಿಸಲಾದ ಈ ಫಲಿತಾಂಶ ವಿಜ್ಞಾನದ ವರದಾನ ಎನ್ನಬಹುದು. ಇದರಂತೆ ಕೃಷಿ ಉತ್ಪಾದನೆಯನ್ನು ಹೆಚ್ಚಿಸಲು ವಿಜ್ಞಾನದ ನೆರವನ್ನು ಪಡೆದರೆ ಕೃಷಿಯ ಉತ್ಪನ್ನ ಹೆಚ್ಚುವುದರಲ್ಲಿ ಸಂಶಯವಿಲ್ಲ. ಭಾರತದಂತಹ ಕೃಷಿ ಪ್ರಧಾನ ದೇಶಕ್ಕಂತೂ ವಿಜ್ಞಾನದ ನೆರವು ಬೇಕೆ ಬೇಕು. ನಮ್ಮ ದೇಶದಲ್ಲಿ ಕೃಷಿ ಉತ್ಪತ್ತಿ ಕಡಿಮೆ ಇರುವುದೂ, ಜನಸಂಖ್ಯೆ ಹೆಚ್ಚುತ್ತಿರುವುದೂ ತಾಳಕ್ಕೆ ತಕ್ಕ ಮೇಳದಂತೆ ಸೇರಿ ಜಟಿಲವಾದ ಸಮಸ್ಯೆಗಳಾಗಿ ಪರಿಣಮಿಸಿವೆ. ಇವುಗಳನ್ನು ಎದುರಿಸಿ ಪರಿಹಾರೋಪಾಯಗಳನ್ನು ಕಂಡುಹಿಡಿಯಬೇಕಾದರೆ ವಿಜ್ಞಾನದ ಮೊರೆ ಹೋಗುವುದು ಅಗತ್ಯ. ಕೃಷಿ ಉತ್ಪತ್ತಿಯನ್ನು ಹೆಚ್ಚಿಸುವ ಸೂಕ್ತ ಸಾಧನವೆಂದರೆ ವಿಜ್ಞಾನವೆಂದು ಧಾರಾಳವಾಗಿ ಹೇಳಬಹುದು. ಇದುವರೆಗೂ ಭಾರತದಲ್ಲಿ ವಿಜ್ಞಾನದ ನೆರವು, ತಾಂತ್ರಿಕ ಸಹಾಯ ಎರಡೂ ಕೃಷಿಗೆ ಅಷ್ಟಾಗಿ ದೊರೆತಿರಲಿಲ್ಲ. ಆದರೆ ಇಂದು ತಾಂತ್ರಿಕತೆ ಮತ್ತು ಸಂಶೋಧನೆಗಳು ಕೃಷಿಯನ್ನು ಜೀವನ ವಿಧಾನದಿಂದ ವ್ಯಾಪಾರಕ್ಕೆ ಪರಿವರ್ತಿಸಿದೆ, ರೂಪಾಂತರಗೊಳಿಸಿದೆ. ಇತ್ತೀಚೆಗೆ ರೈತರು ಕೃಷಿಯ ಬೆಳವಣಿಗೆಗೆ ರಾಸಾಯನಿಕ ಗೊಬ್ಬರಗಳು, ಸುಧಾರಿಸಿದ ಬೀಜಗಳು ಅಗತ್ಯವೆಂದು ಭಾವಿಸಿದ್ದಾರೆ. ಇದರ ಪರಿಣಾಮವಾಗಿ ಹೈಬ್ರಿಡ್ ಬೀಜಗಳು ಕ್ರಿಮಿನಾಶಕಗಳು, ಹೊಸ

ಕೃಷಿಯ ಉಪಕರಣಗಳಾದ ಟ್ರ್ಯಾಕ್ಟರ್ ಮತ್ತು ಬುಲ್ಡೋಜರ್‌ಗಳ ಉಪಯೋಗ
ಹೆಚ್ಚುತ್ತಿದೆ. ಕೃಷಿ ಕ್ಷೇತ್ರದಲ್ಲಿ ಇದೊಂದು ಶುಭ ಸೂಚನೆ.

ಕೃಷಿಯಲ್ಲಿ ವಿಜ್ಞಾನ ಮತ್ತು ತಾಂತ್ರಿಕತೆಯನ್ನು ಅಳವಡಿಸುವಿಕೆ ಎಂದರೆ ಕೃಷಿ ಕಾರ್ಯಾನೆಗಳಿಗೆ ಪ್ರಾಣಿ ಹಾಗೂ ಮಾನವ ಶ್ರಮದ ಬದಲಿಗೆ ಸಾಧ್ಯವಾದ ಕಡೆ ಯಂತ್ರಗಳನ್ನು ಬಳಸುವುದು, ಇಂದಿನ ಯಂತ್ರಗಳ ಯುಗದಲ್ಲೂ ಭಾರತದ ರೈತ ಪ್ರಧಾನವಾಗಿ ಹಳೆಯ, ಉಪಕರಣಗಳನ್ನೇ ಅವಲಂಬಿಸಿದ್ದಾನೆ, ಇದು ಕೃಷಿಯ ಅದಕ್ಷತೆಗೆ ಎಡೆಮಾಡಿಕೊಟ್ಟಿದೆ. ಇದರಿಂದಾಗಿ ಭಾರತ ಕೃಷಿ ಪ್ರಧಾನ ದೇಶವಾದರೂ ಕೃಷಿಯಲ್ಲಿ ಬಹಳ ಹಿಂದುಳಿದಿದೆ. ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಯಾಂತ್ರೀಕರಣದಿಂದ ಕೃಷಿಕ್ರಾಂತಿ ಹೊಂದುವುದು ಅಸಾಧ್ಯವೇನಲ್ಲ.

ಲಾಭಗಳು :—ಕೃಷಿಯಲ್ಲಿ ವಿಜ್ಞಾನ ಮತ್ತು ತಾಂತ್ರಿಕತೆಯನ್ನು ಅಳವಡಿಸುವುದರಿಂದ ದೊರೆಯುವ ಲಾಭಗಳು ಅನೇಕ,

ಯಂತ್ರೋಪಕರಣಗಳನ್ನು ಕೃಷಿಯಲ್ಲಿ ಬಳಸುವುದರಿಂದ ಉತ್ಪಾದನೆ ಅಧಿಕಗೊಳ್ಳುತ್ತದೆ. ಯಂತ್ರಗಳು ಕಡಿಮೆ ಅವಧಿಯಲ್ಲಿ ರೈತರ ಕೃಷಿ ಕಾರ್ಯಗಳನ್ನು ಪೂರೈಸಿಕೊಡುತ್ತವೆ. ನೂರು ಜನ ಕಾರ್ಮಿಕರು ಮಾಡುವ ಕೆಲಸವನ್ನು ಒಂದು ಯಂತ್ರ ಲೀಲಾಜಾಲವಾಗಿ ಮಾಡುತ್ತದೆ. ಒಬ್ಬ ರೈತ ಒಂದು ಜೊತೆ ಎತ್ತುಗಳ ನೆರವಿನಿಂದ ಒಂದು ವಾರ ಉಳುಮೆ ಮಾಡಬಹುದಾದಷ್ಟು ಭೂಮಿಯನ್ನು ಒಬ್ಬ ಕಾರ್ಮಿಕ ಒಂದು ಟ್ರ್ಯಾಕ್ಟರಿನ ನೆರವಿನಿಂದ ಒಂದೇ ದಿನದಲ್ಲಿ ಮಾಡಬಹುದು.

ಯಂತ್ರಗಳ ಬಳಕೆ ದಕ್ಷತೆಯನ್ನು ಹೆಚ್ಚಿಸುತ್ತದೆ ಯಂತ್ರಗಳು ಆಯಾಸವನ್ನು ಕಡಿಮೆ ಮಾಡುತ್ತವೆ. ಕಠಿಣ ಶ್ರಮವನ್ನು ಉಳಿಸುತ್ತವೆ; ವೆಚ್ಚದಲ್ಲಿ ಮಿತವ್ಯಯವನ್ನು ಉಂಟುಮಾಡುತ್ತವೆ. ಕೃಷಿ ಯಂತ್ರೋಪಕರಣಗಳು ಸಂಪನ್ಮೂಲಗಳ ಸಂಪೂರ್ಣ ಬಳಕೆ ನೆರವಾಗುತ್ತವೆ. ಕೃಷಿ ಯಾಂತ್ರೀಕರಣದಿಂದ ಅಧಿಕ ಉತ್ಪನ್ನ ಪಡೆದು, ಅದನ್ನು ನ್ಯಾಯವಾದ ಬೆಲೆಗೆ ಮಾರಿ ಒಳ್ಳೆಯ ಲಾಭಗಳಿಸಬಹುದು. ಕೃಷಿ ಯಾಂತ್ರೀಕರಣದಿಂದ ತೀಕ್ಷ್ಣ ಪದ್ಧತಿ ಸಾಧ್ಯವಾಗುತ್ತದೆ. ಕೃಷಿ ಯಾಂತ್ರೀಕರಣದಿಂದ ಕೆಲಸಕ್ಕೆ ಬಾರದ ಭೂಮಿಯನ್ನು ಉಳುಮೆಯ ವ್ಯಾಪ್ತಿಯಲ್ಲಿ ತರಬಹುದು. ಕೃಷಿ ಯಾಂತ್ರೀಕರಣವು ಜೀವನಾಧಾರ ಸಾಗುವಳಿಯನ್ನಾಗಿ ಪರಿವರ್ತಿಸುವುದರಿಂದ ಆರ್ಥಿಕ ಸ್ವರೂಪದಲ್ಲಿ ಎರಡು ಬಗೆಯ ಬದಲಾವಣೆಗಳನ್ನು ಕಾಣಬಹುದು.

1 ಕೌಟುಂಬಿಕ ಕೃಷಿಯ ಸ್ಥಾನವನ್ನು ಬಂಡವಾಳ ಕೃಷಿ ಆಕ್ರಮಿಸುತ್ತದೆ.
2 ವಸ್ತುಗಳ ಮಾರಾಟಕ್ಕೆ ಆಂತರಿಕ ಮಾರುಕಟ್ಟೆಗಳಲ್ಲದೆ ಅಂತರರಾಷ್ಟ್ರೀಯ ಮಾರುಕಟ್ಟೆಗಳನ್ನು ಹುಡುಕಬೇಕಾಗುತ್ತದೆ ಕೃಷಿ ಯಾಂತ್ರೀಕರಣದಿಂದ ಕೃಷಿ ದಕ್ಷತೆ ಸುಧಾರಿಸುವುದರಿಂದ ಕೃಷಿ ಮತ್ತು ಕೈಗಾರಿಕಾ ಕ್ಷೇತ್ರಗಳ ನಡುವೆ ಸಮಾನತೆ ಹೊಂದಲು ನೆರವಾಗುತ್ತದೆ. ಗ್ರಾಮೀಣ ಪ್ರದೇಶಗಳಲ್ಲಿ ಸಾರಿಗೆ, ವ್ಯಾಪಾರ, ವಿದ್ಯುದೀಕರಣ ಮುಂತಾದ ಕ್ಷೇತ್ರಗಳು ಬೆಳವಣಿಗೆ ಹೊಂದುತ್ತವೆ. ಭೂಮಿಯನ್ನು ಉಳುವ ಕಾರ್ಯದಿಂದ ಹಿಡಿದು ಕೃಷಿ ಉತ್ಪನ್ನಗಳನ್ನು ಮಾರುಕಟ್ಟೆಗಳಲ್ಲಿ ಮಾರಾಟಮಾಡುವವರಿಗೆ ಎಲ್ಲಾ ಕಾರ್ಯಗಳನ್ನು ನಿರ್ವಹಿಸಬಲ್ಲಂತಹ ಯಂತ್ರಗಳು ಇಂದು ಆಚರಣೆಯಲ್ಲಿವೆ

ಭಾರತದಲ್ಲಿ ಆಧುನಿಕ ಕೃಷಿ ಪದ್ಧತಿಯನ್ನು ಮೊದಲಿಗೆ ಅಳವಡಿಸಿದ ಪ್ರಾಂತ್ಯ ಪಂಜಾಬ್. ದೇಶದ ಕೃಷಿ ಯಂತ್ರೋಪಕರಣಗಳ ಶೇಕಡ ಅರ್ಧಭಾಗವನ್ನು ಅಲ್ಲಿ ಬಳಸಲಾಗುತ್ತದೆ. ಈಗ ಅವರು ಹೆಚ್ಚು ಹೆಚ್ಚಾಗಿ ಬಿತ್ತಲು, ಗೊಬ್ಬರ ಹಾಕಲು ಒಕ್ಕಲು ಯಂತ್ರಗಳನ್ನು ಬಳಸುತ್ತಿದ್ದಾರೆ. ಈಚೆಗೆ ಇದೇ ವಾತಾವರಣವು ದೇಶದ ಇತರ ಪ್ರಾಂತ್ಯಗಳಿಗೂ ಹಬ್ಬುತ್ತಿದೆ. ಇದುವರೆಗೂ ಭಾರತದಲ್ಲಿ ವಿಜ್ಞಾನದ ನೆರವು, ತಾಂತ್ರಿಕ ಸಹಾಯ ಎರಡೂ ಕೃಷಿಗೆ ಅಷ್ಟಾಗಿ ದೊರೆತಿರಲಿಲ್ಲ, ಆದರೆ ಇದು ತಾಂತ್ರಿಕತೆ ಮತ್ತು ಸಂಶೋಧನೆಗಳು ಕೃಷಿಯನ್ನು ಜೀವನ ವಿಧಾನದಿಂದ ವ್ಯಾಪಾರ ಸಾಹಸಕ್ಕೆ ಸಂಪರ್ಕಿಸಿವೆ. ಇತ್ತೀಚೆಗೆ ರಾಸಾಯನಿಕ ಗೊಬ್ಬರಗಳು, ಸುಧಾರಿಸಿದ ಬೀಜಗಳು, ಕ್ರಿಮಿನಾಶಕಗಳು, ಟ್ರ್ಯಾಕ್ಟರ್ ಮತ್ತು ಬುಲ್ಡೋಜರ್‌ಗಳ ಉಪಯೋಗ ಹೆಚ್ಚುತ್ತಿದೆ. ಇವುಗಳ ಜೊತೆಗೆ ನೀರನ್ನು ಎತ್ತುವ ಯಂತ್ರಗಳು, ವಿದ್ಯುಚ್ಛಕ್ತಿಯ ಮೋಟಾರ್‌ಗಳು ಡೀಸೆಲ್ ಎಂಜನ್ನುಗಳು, ಗ್ರಾಮಾಂತರ ಪ್ರದೇಶಗಳಲ್ಲಿ ಹೆಚ್ಚು ಜನಪ್ರಿಯವಾಗುತ್ತಿವೆ. ಇವುಗಳ ಬಳಕೆಯನ್ನು ಉತ್ತೇಜಿಸಲು ಅನೇಕ ರಾಜ್ಯಸರ್ಕಾರಗಳು ರೈತರಿಗೆ ದೀರ್ಘಾವಧಿಯಲ್ಲಿ ಸುಲಭ ಕಂತುಗಳಲ್ಲಿ ಹಿಂತಿರುಗಿಸುವಂತೆ ಹಣವನ್ನು ಸಾಲದ ರೂಪದಲ್ಲಿ ಕೊಡುತ್ತಿವೆ. ಸಣ್ಣ ರೈತರಿಗೆ ಯಾಂತ್ರಿಕ ಕೃಷಿಯಿಂದಾಗುವ ಪ್ರಯೋಜನಗಳ ಬಗ್ಗೆ ಅರಿವು ಮೂಡಿಸಲು ಎಲ್ಲಾ ರಾಜ್ಯಗಳಲ್ಲೂ "ಆಗ್ರೋ ಇಂಡಸ್ಟ್ರೀಸ್ ಕಾರ್ಪೊರೇಷನ್" ಗಳನ್ನು ಸ್ಥಾಪಿಸಲಾಗಿದೆ. ಇವು ಟ್ರ್ಯಾಕ್ಟರ್‌ಗಳನ್ನು, ಇತರೇ ಕೃಷಿ ಉಪಕರಣಗಳನ್ನು ಯಂತ್ರಗಳ ಬಿಡಿ ಭಾಗಗಳನ್ನು ನಗದಿಗೆ ಹಾಗೂ ಬಾಡಿಗೆಗೆ ಒದಗಿಸುತ್ತವೆ. ರಿಪೇರಿಯ ಸೌಲಭ್ಯಗಳನ್ನೂ ಈ ಸಂಸ್ಥೆಗಳಿಂದ ಪಡೆಯಬಹುದು. ನಮ್ಮ ದೇಶದಲ್ಲಿ ಕೃಷಿ ಯಂತ್ರೋಪಕರಣಗಳಿಂದ ದೊರೆಯುವ ಶಕ್ತಿಯನ್ನು ಕೃಷಿಯ ಇತರ ಕಾರ್ಯಗಳಿಗೂ ಬಳಸಲಾಗುತ್ತಿದೆ ಉದಾಹರಣೆಗೆ ಎಣ್ಣೆ ಬೀಜ,

ಟ್ಟು ಹಿಂಡುವುದು, ಹಿಟ್ಟು ಮಾಡುವುದು ಆದಾಗ್ಯೂ ಕೃಷಿ ಯಂತ್ರೋಪಕರ
ಗಳ ಬಳಕೆಯಲ್ಲಿ ಇನ್ನೂ ತೃಪ್ತಿಕರ ಯಶಸ್ಸು ದೊರೆತಿಲ್ಲ. ಭಾರತದ ರೈತರಲ್ಲಿ
ಕ್ಷರತೆಯ ಮಟ್ಟ ಕಡಿಮೆ. ಆರ್ಥಿಕ, ಸಾಮಾಜಿಕ ಹಾಗೂ ಶೈಕ್ಷಣಿಕವಾಗಿ
ವರಿನ್ನೂ ಬಹು ಹಿಂದೆಯೇ ಉಳಿದಿದ್ದಾರೆ. ವಾಸ್ತವಿಕತೆಯನ್ನು ಅರ್ಥಮಾಡಿ
ಾಡಿಕೊಳ್ಳುವ ಶಕ್ತಿ ಅವರಿಗಿಲ್ಲವಾಗಿದೆ. ಭಾರತಕ್ಕೆ ಸ್ವಾತಂತ್ರ್ಯ ಬಂದು ಹಲ
ಾರು ವರ್ಷಗಳೇ ಕಳೆದರೂ ನಮ್ಮ ರೈತರಲ್ಲಿ ಇನ್ನೂ ಸಾಕಷ್ಟು ಸುಧಾರಣೆಗ
ಾಗಿಲ್ಲ. ಹಿರಿಯರಿಂದ ಪರಂಪರಾನುಗತವಾಗಿ ಬಂದಿರುವ ಸಾಂಪ್ರದಾಯಿಕ
ದ್ಧತಿಗಳನ್ನು ಅವರಿನ್ನೂ ಬಿಟ್ಟಿಲ್ಲ. ಮೂಢನಂಬಿಕೆಗಳಿಂದ ಅವರಿನ್ನೂ ಮುಕ್ತ
ಾಗಿಲ್ಲ ಮುಖ್ಯವಾಗಿ ರೈತರಲ್ಲಿ ಸುಧಾರಣೆಯಾಗದೇ ಕೃಷಿಯಲ್ಲಿ ಪ್ರಗತಿ ಸಾಧಿ
ುವುದು ಅಸಾಧ್ಯ. ಭಾರತದ ಕೃಷಿಯಲ್ಲಿ ವಿಜ್ಞಾನ ಮತ್ತು ತಾಂತ್ರಿಕತೆಯ
ವಶ್ಯಕತೆ ಬಹಳಷ್ಟಿದೆ. ಕೆಲವು ಕಾರಣಗಳಿಂದ ಭಾರತಕ್ಕೆ ಅದು ಲಾಭದಾಯ
ವೂ ಆಗಿದೆ ಆದರೆ ಭಾರತದ ಕೃಷಿಯನ್ನು ಸಂಪೂರ್ಣವಾಗಿ ಯಾಂತ್ರೀಕರಣ
ೊಳಿಸುವುದು ಸಾಧ್ಯವಿಲ್ಲ ಅದು ಅಪೇಕ್ಷಣೀಯವೂ ಅಲ್ಲ ಎಂಬುದು ಇಂದಿನ
ರಿಸ್ಥಿತಿಯಲ್ಲಿ ಸ್ಪಷ್ಟವಾಗಿದೆ.

---

39ನೇ ಪುಟದಿಂದ)

ಲ್ಲಿ ಆಕ್ಸ್‌ಫರ್ಡ್ ವಿಶ್ವವಿದ್ಯಾಲಯ ಹಿಲ್‌ನಿಗೆ ಗೌರವ ಡಾಕ್ಟರೇಟ್ ನೀಡಿತು.
ವನ ಮರಣಾನಂತರ ಮಹಾವ್ಯಕ್ತಿಗಳ ಸಮಾಧಿಗೆ ಮೀಸಲಾದ ವೆಸ್ಟ್ ಮಿನಿಸ್ಟರ್
ಚೆಯಲ್ಲಿ ಹೂಳಿದರು.

ಹಿಲ್ ರೂಪಿಸಿದ ಅಂಚೆ ವ್ಯವಸ್ಥೆಯ ಸುಧಾರಣೆಗಳನ್ನು ಪ್ರತಿಯೊಂದು ದೇಶ
ೂ ಅನುಸರಿಸುತ್ತಿವೆ ಭಾರತದಲ್ಲಿ ಅದು ಬಳಕೆಗೆ ಬಂದುದು ೧೮೫೪ ರಲ್ಲಿ ಅಂಚೆ
ಸೌಕರ್ಯದ ಇತಿಹಾಸದಲ್ಲೇ ಮರೆಯಲಾಗದ ಹೆಸರು ಈ ಮಹಿಮಾನ್ವಿತನದು ಅಲ್ಲವೆ?

---

ಅಯ್ಯ, ದೂರದಲಿರ್ದಹೆ ಎಂದು ಬಾಯಾರಿ ಬಳಲುತಿರ್ದೆನಯ್ಯಾ ನಾನು
ಸಾರಿ ಬಂದು ನೀನೆನ್ನ ಕರಸ್ಥಲದಲ್ಲಿ ಮೂರ್ತಿಗೊಂಡಿರೆ, ಇನ್ನಾರತಿ
ಲ್ಲಿಸಲಿ ಲಿಂಗ. ಅಲಿ ನಿಮ್ಮಲ್ಲಿ ನಟ್ಟವು ನೋಡಯ್ಯ. ಚನ್ನಮಲ್ಲಿಕಾರ್ಜುನಯ್ಯಾ
ನ್ನೆನ್ನ ಕರಸ್ಥಲದಲ್ಲಿ ನೋಡಿ ನೋಡಿ ಕಂಗಳೇ ಪ್ರಾಣವಾಗಿರ್ದೆನಯ್ಯಾ.

— ಅಕ್ಕಮಹಾದೇವಿ

# ಶ್ರೀ ಶಿವಕುಮಾರ ಸ್ವಾಮಿ



—ಜಿ. ಯಮುನ, ತುಮಕೂರು.

ಶ್ರೀ ಗುರು ಶಿವಕುಮಾರ ಮಠಾಧೀಶ
ಕಂಡಿಲ್ಲ ಕೇಳಿಲ್ಲ ನಿನ್ನಂಥ ಕೀರ್ತಿ ಪುರುಷ
ಇಳೆಗೆಲ್ಲ ನೀ ಶ್ರೀ ಗುರು ಪರಮೇಶ

ತನು-ಮನ-ಚಲನ-ವಲನದಲ್ಲಿ ಶುದ್ಧ ನೀನು
ಸ್ತಾವರಾಲಿಂಗ ಗುರು ಜಂಗಮನು ನೀನು
ಕಲಿಯುಗದ ದೇವರ ದೇವನು ನೀನು

ಭೂಮಿಯೊಳು ಜನಿಸಿ ಸಿದ್ಧಗಂಗೆಯೊಳು ನೆಲಸಿ
ಭಕ್ತರನ ಕರೆಸಿ ಸಿದ್ಧಲಿಂಗನ ದರುಶನವ ಕೊಡಿಸಿ
ಮುಕ್ತಿಯಾ ಯುಕ್ತಿಯ ನೀನೆಲ್ಲರಿಗೂ ಕಲಿಸಿದೆ

ಏಸುಕ್ರಿಸ್ತನಿಗೆದುರಾದವರ ನಾ ಕಂಡೆ
ಮಹಾತ್ಮ ಗಾಂಧಿಗೆದುರಾದವರ ನಾ ಕಂಡೆ
ಸ್ವಾಮಿಯೇ ನಿನಗೆದುರಾದವರ ನಾ ಕಾಣೆ

ಅಂದಾದ ಸುವರ್ಣದ ಮಹೋತ್ಸವ ಹಿಂದೆಂದೂ ನಡೆದಿಲ್ಲ
ಮುಂದೆಂದೂ ನಡೆಯೊಲ್ಲ ನಿನ್ನ ಸನ್ನಿಧಿಯಲ್ಲಿ
ನಡೆವ ದಾಸೋಹ ಮಹೋತ್ಸವ ಇನ್ನೆಲ್ಲೂ ನಡೆಯೊಲ್ಲ

ಕರೆದಾಕ್ಷಣ ನೀ ಬಂದು ಆಶೀರ್ವದಿಸುವೆ ನೀನಿಂದು
ನಿನ್ನಂಥ ದೈವಾನುಸಂಭೂತ ಸಿಗುವುದು ಯುಗದಲ್ಲೊಂದು
ಕೊನೆಯುಸಿರಿ ಇರುವ ತನಕ ನೆನೆಸುವೆ ನಿನ್ನನೆಂದೆಂದು

ವಿದ್ಯೆಯನಂಚಿ ಅನ್ನನೆಲ್ಲರಿಗಂಚಿ
ಭಕ್ತಿ ರಸವ ನೀ ಜಗದೊಳಗಂಚಿ
ಮಿಂಚಿ ಹೋಗದಿರು ನೀ ಬಾನಂಚಿ



## ನೀ! ಕಾಣಯ್ಯSS

ಕಟ್ಟಿಸಿದ ದೇಗುಲದಿ,
ಕರಗುವ ಕಲ್ಲಾಗದು ?
ತಿಳಿಯದಯ್ಯಾSS.

ತೆರೆದ, ಬಾಗಿಲದಿ.
ಮಾಯೆಯು, ದಾರಿಯು.
ಕಾಣದಯ್ಯಾSS

ಗಂಟೆಗಳ ನಾದದಲಿ.
ಮನದ ಕರೆಯು
ಕೇಳದಯ್ಯಾSS

ಏಳುವ ಮೆಟ್ಟಿಲದಿ,
ಜಾರುವ ಮೆಟ್ಟಿಲು
ತಿಳಿಯದಯ್ಯಾSS

ಬರುವ ಭಕ್ತರಲಿ,
ನಿಜ ಭಕ್ತನಾರು, ?
ಕಾಣದಯ್ಯಾSS

ಉರಿವ ಜ್ಯೋತಿಯೊಳು,
ದಿವ್ಯ ಜ್ಯೋತಿಯಾವುದು ?
ತಿಳಿಯದಯ್ಯಾSS

ಅಜ್ಞಾನಿಯ, ಸಂಗದಲಿ
ಜ್ಞಾನಿಯು, ಸೇರಿಯು
ಕಾಣದಯ್ಯಾSS

ಅಂಗೈ, ಅರಮನೆಯಲಿ,
ಕಂಗೊಳಿಸುವ, ಶ್ರೀ,
ಶಂಭುಲಿಂಗವ, ನೀ,
ಕಾಣದಯ್ಯಾS.

—ಶ್ರೀಮತಿ ಲೀಲಾ ಕಲಕೋಟಿ
ವಿದ್ಯಾ ಚೇತನ, ನವೋದಯ ನಗರ, ಧಾರವಾಡ–3

---

ಪ್ರಾಣ ಲಿಂಗವೆಂದರಿದ ಬಳಿಕ ಪ್ರಾಣನಾಸೆ ಹಿಂಗಿತ್ತು. ಲಿಂಗ ಪ್ರಾಣವೆಂದರಿದ ಬಳಿಕ, ಅಂಗದಾಸೆ ಹಿಂಗಿತ್ತು. ಲಿಂಗ ಸೋಂಕು ಸಂಗಿಗೆ ಕಂಗಳೇ ಕರುವಾಗಿದ್ದವಯ್ಯ, ಚನ್ನಮಲ್ಲಿಕಾರ್ಜುನಯ್ಯ ಹಿಂಗದೆ ಅನಿಮಿಷನಾದ ಶರಣಂಗೆ.

★ ★ ★

ಅಂಗ ಲಿಂಗವ ವೇಧಿಸಿ, ಅಂಗ ಲಿಂಗದೊಳಗಾಯಿತ್ತು. ಮನ ಲಿಂಗವ ವೇಧಿಸಿ ಮನ ಲಿಂಗದೊಳಗಾಯಿತ್ತು. ಭಾವ ಲಿಂಗವ ವೇಧಿಸಿ ಭಾವ ಲಿಂಗದೊಳಗಾಯಿತ್ತು. ಚನ್ನಮಲ್ಲಿಕಾರ್ಜುನ, ನಿಮ್ಮೊಲುಮೆಯ ಸಂಗದಲ್ಲಿರ್ದು ಸ್ವಯಂ ಲಿಂಗಿಯಾದೆನು.

—ಮಹಾದೇವಿಯಕ್ಕ.

ಶ್ರೀ ಗುರುಬಸವಲಿಂಗಾಯ ನಮಃ

ಕಾಶ್ಯ ಸಿಂಹಾಸನಾಧೀಶ್ವರ ಪರಮ ಪೂಜ್ಯ ಶ್ರೀ ಮನ್ಮಹಾರಾಜ ನಿರಂಜನ ಜಗದ್ಗುರು ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು ಮೂರುಸಾವಿರ ಮಠ, ಹುಬ್ಬಳ್ಳಿ. ಅವರ ಪೀಠಾರೋಹಣದ ಇಪ್ಪತ್ತೈದು ವರ್ಷಗಳ ಮಹಾ ಮಹೋತ್ಸವವು ಬರಲಿರುವ ೧೯೮೭ರ ಪ್ರಭವನಾಮ ಸಂವತ್ಸರದಲ್ಲಿ ಅರ್ಥಪೂರ್ಣವಾಗಿ ಅವರ ಸಾವಿರ ಸಾಧನೆಗಳ ಮಹಾಭಿವ್ಯಕ್ತಿಯಾಗಿ ಬರಲಿದೆ! ಇದೊಂದು ಉತ್ಸವಕ್ಕಾಗಿ ಉತ್ಸವವಲ್ಲ. ಇಪ್ಪತ್ತೈದು ವರ್ಷಗಳಲ್ಲಿ ಪೂಜ್ಯ ಶ್ರೀ ಜಗದ್ಗುರುಗಳವರು ಸಾಧಿಸಿರುವ ಸಫಲ ಸ್ಥಿತಿ-ಗತಿಗಳನ್ನು ಅವಲೋಕಿಸಿದರೆ ಅವರು ಗೈದ ಶೈಕ್ಷಣಿಕ ಕ್ರಾಂತಿ, ಹಾಗೂ ವೈದ್ಯಕೀಯ, ಧಾರ್ಮಿಕ ಜಾಗೃತಿ, ಸಾಹಿತ್ಯಿಕ, ಸಾಂಸ್ಕೃತಿಕ ಹಾಗೂ ಸಾಮಾಜಿಕ ಪ್ರಗತಿ ಮುಂತಾದವುಗಳು ಪವಾಡ ಸದೃಶವಾಗಿ ತಂತಾನೆ ಬೆಳೆದು ನಿಂದು ಅವರ ರಜತ ಮಹೋತ್ಸವಕ್ಕೆ ಅರ್ಥಪೂರ್ಣವಾದ ಮಹತ್ವವನ್ನು ತಂದಿದೆ.

ಈಗಾಗಲೆ ಸಪ್ಟೆಂಬರ ೧೯೮೬ರ ೧೬ರಂದು ಕರ್ನಾಟಕ ರಾಜ್ಯದ ಹತ್ತು ಜಿಲ್ಲೆಗಳ ಇಪ್ಪತ್ತೈದು ಊರುಗಳಲ್ಲಿ ರಜತ ಮಹೋತ್ಸವದ ಸವಿನೆನಪಿಗಾಗಿ ಶರಣರ ಸಂದೇಶ ಬೀರುವ ಇಪ್ಪತ್ತೈದು ಶಿವಶರಣ ವಚನ ಗ್ರಂಥಗಳನ್ನು ಬಿಡುಗಡೆ ಮಾಡುವುದನ್ನು ನಿರ್ಧಾರ ಮಾಡಿದೆ. ಇನ್ನು ಕೆಲವೇ ದಿನಗಳಲ್ಲಿ ಆಮಂತ್ರಣ ಪತ್ರಿಕೆ ಹೊರಬರಲಿವೆ. ಶ್ರೀ ನಿಜಗುಣಶಿವಯೋಗಿಗಳಿಂದ ವಿರಚಿತ "ವಿವೇಕ ಚಿಂತಾಮಣಿ" ಗ್ರಂಥದ ಬಿಡುಗಡೆಯೊಂದಿಗೆ ಮೈಸೂರ ಜಿಲ್ಲೆಯ ಶಂಭುಲಿಂಗ ಬೆಟ್ಟದಿಂದ ಪ್ರಾರಂಭ ಮತ್ತು ೧೯೮೭ರ ಯುಗಾದಿಯಿಂದ ರಜತ ಮಹೋತ್ಸವದ ವಿಶೇಷ ಕಾರ್ಯಕ್ರಮಗಳು ವೈಭವದೊಡನೆ ಜರುಗಲಿವೆ. ಪೂರ್ವಭಾವಿಯಾಗಿ ಎರಡು ತಿಂಗಳ ಬಸವೇಶ್ವರ ಪುರಾಣವು ಜರುಗಿ ನಂತರ

೧) ೧೦೧ ಗುರು ವಿರಕ್ತರ ಮಂಟಪ ಪೂಜೆ. ೨) ೨೫೧ ಸರ್ವ ಧರ್ಮದ ದೀನ ದಲಿತರ ಉಚಿತ ಲಗ್ನಗಳು. ೩) ಬೃಹತ್ ಕಲ್ಯಾಣ ಮಂಟಪದ ಅಡಿಗಲ್ಲ ಸಮಾರಂಭ. ೪) ರಾಷ್ಟ್ರಮಟ್ಟದಲ್ಲಿ ಸರ್ವಧರ್ಮ ಸಮ್ಮೇಳನ. ೫) ಶಿವಾನುಭವ ಸಮ್ಮೇಳನ. ೬) ಮಹಿಳಾ ಸಮ್ಮೇಳನ. ೭) ಜನಪದ ಸಾಹಿತ್ಯ ಸಮ್ಮೇಳನ. ೮) ವೀರಶೈವ ವಟುಗಳಿಗೆ ಲಿಂಗ ದೀಕ್ಷೆ ಹಾಗೂ ಲಿಂಗಧಾರಣೆ. ೯) ಲಕ್ಷಾಂತರ ಜನರಿಗೆ ಅನ್ನದಾಸೋಹದ ವ್ಯವಸ್ಥೆ. ೧೦) ವಿಶೇಷ ಸಮಾರಂಭದಲ್ಲಿಯೂ ಮತ್ತೆ ೨೫ ಗ್ರಂಥಗಳ ಪ್ರಕಟಣೆ. ೧೧) ಪತ್ರಕರ್ತರ ಸಮ್ಮೇಳನ. ೧೨) ಮಠಾಧಿಪತಿಗಳ ಸಮ್ಮೇಳನ. ೧೩) ಕವಿ ಸಮ್ಮೇಳನ.

ಇವೆಲ್ಲ ಕಾರ್ಯಕ್ರಮಗಳನ್ನು ಯಶಸ್ವಿಗೊಳಿಸಲು ಅಜಮಾಸು ಇಪ್ಪತ್ತೈದು ಲಕ್ಷ ರೂಪಾಯಿಗಳ ಸಂಗ್ರಹದ ಯೋಜನೆ ಮಾಡಲಾಗಿದೆ. ಕಾರಣ ಸಕಲರು ಉದಾರ ಮನಸ್ಸಿನಿಂದ ಸಹಾಯ ಸಲ್ಲಿಸಿ ರಜತ ಮಹೋತ್ಸವವು ಅರ್ಥಪೂರ್ಣವಾಗಿ ಜರುಗುವಂತೆ ಸಹಕರಿಸಬೇಕಾಗಿ ವಿನಂತಿ.

ಜೆ. ಜಿ. ರಜತಮಹೋತ್ಸವ ಸಮಿತಿ.
ಮೂರುಸಾವಿರಮಠ,
ಹುಬ್ಬಳ್ಳಿ.

ಫೋನ; ನಂ. ೯೩೦೮೧
" " ೬೨೩೫೬

# ಗ್ರಾಮಾಂತರ ಬಸವ ಜಯಂತಿ

—ಹೆಚ್. ವಿ. ವೀರಭದ್ರಯ್ಯ

ಆತ್ಮೀಯ ಶರಣ ಬಂಧು,

ಒಮ್ಮೊಮ್ಮೆ ಅನ್ನಿಸುತ್ತದೆ-ನಿನ್ನನ್ನು ಜೊತೆಗಿಟ್ಟುಕೊಂಡೇ ಪರಮ ಪೂಜ್ಯ ಶ್ರೀ ಶ್ರೀಗಳವರು ನಡೆಸುತ್ತಿರುವ ಬಸವ ತತ್ವ ಪ್ರಚಾರ ಮಹಾಮಣಿಹದಲ್ಲಿ ಭಾಗಿಯಾದರೆ ಎಷ್ಟು ಚೆನ್ನ ಎಂದು. ಆದರೆ ನಿನಗಿರುವ ಹತ್ತಾರು ಕಾರ್ಯ ಗೌಶವಗಳನ್ನು ನೆನೆದು ಸಾಂತ್ವನ ಮಾಡಿಕೊಳ್ಳುತ್ತೇನೆ.

ಸಕ್ಕರೆಗನಸಿನ ತಲೆದೂಗುವ ಕಬ್ಬಿನ ಗದ್ದೆಗಳು, ಕೃತಜ್ಞತಾ ಭಾವದಿಂದ ಮಾಗಿ ತಲೆಬಾಗಿ ಭೂತಾಯಿಗೆ ನಮಸ್ಕರಿಸುವ ಭತ್ತದ ಗದ್ದೆಗಳು, ಕೈಬೀಸಿ ಕರೆಯುವ ತೆಂಗು ಬಾಳೆಯ ತೋಟಗಳು—ಕೃಷ್ಣರಾಜ ಸಾಗರದಿಂದ ಹರಿದು ಬರುವ ಕಾವೇರಿಯ ವಿವಿಧ ನರ್ತನ ನಾಲೆಗಳು, ಮಂಡ್ಯದ ಶ್ರೀಮಂತ ಸಂಸ್ಕೃತಿಯ ಮಧ್ಯೆ ಬಸವಣ್ಣ ಪ್ರಾರಂಭಿಸಿದ ದಾಸೋಹ ಮಣಿಹಕ್ಕೆ ತನ್ನ ಅಲ್ಪ ಸೇವೆಯನ್ನು ಅರ್ಪಿಸಲು ಸಂಕಲ್ಪಿಸಿದ ಕಿರು ಹಳ್ಳಿ ಮಾಚಹಳ್ಳಿ. ಭಕ್ತಿಯ ಬೆಳೆಗೆ ದೇವನೂರು ಗುರುಮಲ್ಲೇಶನ ಆಶಿರ್ವಾದ. ಮುಗ್ಧ ಶುದ್ಧ ಗ್ರಾಮೀಣ ಬಂಧುಗಳು, ಭಕ್ತಿಯ ಚಿನ್ನದ ಶ್ರೀ ಶ್ರೀಗಳಿಗೆ ಗ್ರಾಮಾಂತರ ಬಸವ ಜಯಂತಿ ಆಚರಣೆ ಅಲ್ಲಿ. 20-3-1986 ರಂದು ಅತ್ಯಂತ ಶ್ರದ್ಧೆ ಭಕ್ತಿಗಳಿಂದ ಸ್ವಾಗತ. ಗ್ರಾಮದುದ್ದಗಲಕ್ಕೂ ತಳಿರು ತೋರಣ. ಉತ್ಸಾಹದ ಸಮಾರಂಭ. ಭಕ್ತಿಯ ಕಲಶ.

ಮಾಚಹಳ್ಳಿಯ ಜೀವನದಲ್ಲಿ ಬಂಗಾರದ ದಿನ. ದಾಸೋಹ ಮಠದ ಸ್ಥಾಪನೆ, ಬಸವ ಜಯಂತಿಯ ಆಚರಣೆ, ಮಾತು ಕೃತಿಗಳು ಸಂಗಮಿಸಿದ ಸಮಾರಂಭ. ವೀರಶೈವ ಮಠಗಳು ಹಳ್ಳಿ ಹಳ್ಳಿಗಳಲ್ಲೂ ಇವೆ. ಜನಸಾಮಾನ್ಯರೊಂದಿಗೆ ಬೆರೆತು ಬಾಳಿವೆ, ಬಾಳುತ್ತಲಿವೆ. ಅವ್ಯವಸ್ಥೆಗೊಂಡ ಸಮಾಜವನ್ನು ಮಠಾಧಿಪತಿಗಳು ತಮ್ಮ ಸಾಂತಃಕರಣದಿಂದ, ವಿದ್ವತ್ತಿನಿಂದ, ವೈದ್ಯಾದಿ ವಿದ್ಯೆಗಳಿಂದ, ಆಡಳಿತ ವಿಚಕ್ಷಣೆಯಿಂದ, ಎಲ್ಲಕ್ಕೂ ಮಿಗಿಲಾಗಿ ಶುದ್ಧ ಚಾರಿತ್ರ್ಯದಿಂದ ಧಾರ್ಮಿಕ ವಾತಾವರಣವನ್ನುಂಟುಮಾಡುತ್ತ, ಕ್ರಿಯಾಶೀಲ ಸಮಾಜವನ್ನು ರೂಪಿಸುತ್ತಿದ್ದರು. ಆ ಪರಂಪರೆ ಮುಂದುವರಿಯಬೇಕೆಂಬ ಮಹದಾಶೆಯಿಂದ ಪರಮ ಪೂಜ್ಯ ಸಿದ್ಧಗಂಗಾ ಶ್ರೀ ಶ್ರೀಗಳು ಇಂದು ಬಸವ ಜಯಂತಿ ಆಚರಣೆಯ ಮೂಲಕ ದಿನ

ವೆಂದರಿಯದೆ, ವಾರವೆಂದರಿಯದೆ, ಹಗಲೆನ್ನದೆ, ಇರುಳೆನ್ನದೆ, ಸ್ವಕ್ಷೇತ್ರ ಅನ್ಯಕ್ಷೇತ್ರ ವೆನ್ನದೆ, ಸ್ವ ಸಮಾಜ, ಅನ್ಯ ಸಮಾಜವೆನ್ನದೆ ಸೇವಾ ಜ್ಯೋತಿಯನ್ನು ಹಿಡಿದು ನಡೆದಿದ್ದಾರೆ ನಮ್ಮ ಪುಣ್ಯ ಮಾಚಹಳ್ಳಿಗೂ ಪೂಜ್ಯರು ದಯಮಾಡಿಸಿದ್ದು-ಎಂಬು ದಾಗಿ ಪೂಜ್ಯ ಶ್ರೀ ಶ್ರೀ ಶಾಂತಮಲ್ಲಿಕಾರ್ಜುನ ಸ್ವಾಮಿಗಳು ಜೇವೂರು ಮಠ -ಅವರು ಉಪನ್ಯಾಸ ಮಾಡಿದರು.

ದೇವನೂರು ಮಠದ ಪೂಜ್ಯ ಶ್ರೀ ಶ್ರೀ ಮಹಾಂತ ಸ್ವಾಮಿಗಳು ಸಭೆಯಲ್ಲಿ ಆಶೀರ್ವಚನ ನೀಡಿದರು.

ನನ್ನ ಆರಾಧ್ಯ ಮೂರ್ತಿಗಳು ಬಸವಣ್ಣ ಮತ್ತು ಸಿದ್ಧಗಂಗಾ ಶ್ರೀಗಳು, ನಾನು ಬಸವಣ್ಣನವರನ್ನು ನೋಡಿರಲಿಲ್ಲಾ ಆದರೆ ಇಂದು ಶ್ರೀ ಶ್ರೀಗಳವರೇ ನನಗೆ ಬಸವಣ್ಣನವರಾಗಿ ಕಾಣುತ್ತಿದ್ದಾರೆ. ಮಾಚಹಳ್ಳಿಯ ನೆಲ, ಜಲ, ಜನರ ಬಾಳು ಇಂದು ಧನ್ಯ ವೀರಶೈವ ಸಮಾಜವಿಂದು ವಿಘಟಿತವಾಗುತ್ತಿದೆ. ಧಾರ್ಮಿಕ ಆಚರಣೆಗಳಿಂದ ಯುವ ಜನಾಂಗ ದೂರ ಸರಿಯುತ್ತಿದೆ. ಹಿರಿಯರ ಬೇಜವಬ್ದಾರಿತನದಿಂದ ಸಮಾಜ ರೋಗಗ್ರಸ್ಥವಾಗುತ್ತಿದೆ. ಸಮಾಜಕ್ಕೆ ಆಗುವ ಅನ್ಯಾಯ ವನ್ನು ಪ್ರತಿಭಟಿಸುವ ಎದೆಗಾರಿಕೆಯಿಲ್ಲದಷ್ಟು ನಿರ್ವೀರ್ಯವಾಗುತ್ತಿದೆ. ನಮ್ಮನ್ನು ಪ್ರತಿನಿಧಿಸುವ ಶಾಸಕರು ಹುರುಳಿಲ್ಲದ ಔದಾರ್ಯದ, ಮಾತುಗಳನ್ನಾಡುತ್ತಿದ್ದಾರೆ. ಜನನಾಯಕರು ಇಂದು ಉದಾತ್ತ ದೃಷ್ಟಿಯುಳ್ಳವರಾಗುತ್ತಿಲ್ಲ, ಬದಲಾಗಿ ಒಳ ಪಂಗಡಗಳ ವಿಷ ಬೀಜ ಬಿತ್ತುತ್ತಿದ್ದಾರೆ, ಯುವ ಜನಾಂಗವನ್ನು ದ್ವೇಷ, ಕಲಹ, ಅಸೂಯಾ ಪರರನ್ನಾಗಿ ಬೆಳೆಸುತ್ತಿದ್ದಾರೆ--ಇದಕ್ಕಿಂತ ಹೇಯವಾದುದು ಇನ್ನೊಂದಿಲ್ಲ. ಸುದೈವ ಪರಮ ಪೂಜ್ಯ ಸಿದ್ಧಗಂಗಾ ಶ್ರೀ ಶ್ರೀಗಳು ಇದನ್ನೆಲ್ಲ ಮೆಟ್ಟಿ ಮುನ್ನಡೆದಿದ್ದಾರೆ, ಬಸವಾದಿ ಪ್ರಮಥರ ಸಂದೇಶವನ್ನು ಸಾರುತ್ತಾ ಸಾಗಿದ್ದಾರೆ-ಎಂಬು ದಾಗಿ ಮಂಡ್ಯ ಜಿಲ್ಲಾ ಬಸವ ಸಮಿತಿ ಅಧ್ಯಕ್ಷರಾದ ಶ್ರೀ ನಾಗರಾಜಪ್ಪನವರು ಉಪನ್ಯಾಸ ಮಾಡಿದರು. ಬಸವ ಜಯಂತಿ ಎತ್ತಿನ ಹಬ್ಬವಲ್ಲ. ಮಹಾಮಾನ ವತಾವಾದಿ, ಸಮಗ್ರ ಕ್ರಾಂತಿಯ ಮೂಲ ಪುರುಷ, ಕಾಯಕ-ದಾಸೋಹದ ದೇವರೂವಾರಿ ಬಸವಣ್ಣನ ಪುಣ್ಯ ಸ್ಮರಣೆ. ಅವರ ಸಂದೇಹದಂತೆ ಜೀವನ ನಡೆಸ ಬೇಕೆಂಬ ಸದಿಚ್ಛೆಗೆ ಸಾಧನ. ಅಂತಹ ಪುಣ್ಯ ಪಥವನ್ನು ತೋರಿಸಬಂದಿರುವ ಪರಮ ಪೂಜ್ಯ ಶ್ರೀ ಶ್ರೀಗಳವರಿಗೆ ನಾವೆಲ್ಲ ತಲೆಬಾಗಿ ನಮಿಸೋಣ ಎಂಬು ದಾಗಿ ಮಂಡ್ಯ ಜಿಲ್ಲಾ ವೀರಶೈವ ಸಮಾಜದ ಅಧ್ಯಕ್ಷರಾದ ಶ್ರೀ ಪುಟ್ಟಮಾದ ಪ್ಪನವರು ನುಡಿದರು.

ಕೂಡಲಸಂಗ ಬಸವಣ್ಣನನ್ನು ಮರ್ತ್ಯದ ಕಮ್ಮಟಕ್ಕೆ ಕಳುಹಿಸಿಕೊಟ್ಟು ಮಹೋಪಕಾರ ಮಾಡಿದ. ಬಸವಣ್ಣ ಬಂದನೆಂದು ಸಿದ್ಧರಾಮ, ಪ್ರಭುದೇವ, ಮತ್ತೆಲ್ಲ ಕಾಯಕ ಜೀವಿಗಳು ಧಾವಿಸಿ ಬಂದರು ಮಹಾಮನೆಗೆ ಅನುಭವಮಂಟಪಕ್ಕೆ ಅವರೆಲ್ಲ ಮನವನ್ನು 'ಮಹ' ವನ್ನಾಗಿ ಮಾಡಿದ ಮಹಾಶರಣರು. ಸರ್ವ

ರನ್ನೂ ಸಮಾನವಾಗಿ ಭಾವಿಸಿ ಬಂದರು. ಅವರ ಜೀವನವೇ ನಮಗೆ ದಿವ್ಯ ಸಂದೇಶ-ಎಂದು ಸಿದ್ಧಗಂಗಾ ಸಂಜೆಕಾಲೇಜಿನ ಪ್ರಾಚಾರ್ಯರಾದ ಶ್ರೀ ಬಿ. ವೀರ ಭದ್ರಯ್ಯನವರು ಮಾತನಾಡಿದರು.

ಭೀತಿಯಿಂದ ಆರಾಧನೆ ಮಾಡುವುದನ್ನು ತಪ್ಪಿಸಿ ಪ್ರೀತಿಯಿಂದ ಆರಾಧಿಸುತ್ತ, ದುಡಿದು ಸುಖೀ ಸಮಾಜವನ್ನು ನಿರ್ಮಾಣ ಮಾಡುವ ಹೊಸ ದೃಷ್ಟಿಯನ್ನು ನೀಡಿದ ಕಾರಣಿಕ ಪುರುಷ ಬಸವಣ್ಣ. ಆ ಮಹಾನುಭಾವನ ಜೀವನ ಸಂದೇಶವನ್ನು ಆಧುನಿಕ ಜನಾಂಗಕ್ಕೆ ಪರಿಚಯಿಸುವ ಮಹಾ ಕಾರ್ಯದಲ್ಲಿ ಪೂಜ್ಯ ಶ್ರೀ ಶ್ರೀಗಳವರು ಸಂಕಲ್ಪ ಬದ್ಧರಾಗಿ ಹೊರಟಿದ್ದಾರೆ–ಎಂದರು ದೊಡ್ಡಸಾರಂಗಿ ಶ್ರೀ ಮೃತ್ಯುಂಜಯಪ್ಪನವರು.

ಜನಪದರಿಗಾಗಿ ತನ್ನನ್ನು ಅರ್ಪಿಸಿಕೊಂಡ ಬಸವಣ್ಣನನ್ನು, ಗುರು, ದೇವರು, ರಾಜ, ಮಹಾನುಭಾವ, ಶರಣ ಎಂದೆಲ್ಲ ಪ್ರಾಜ್ಞರು ಕರೆದರೆ, ಹಳ್ಳಿಯ ಮುಗ್ಧರು 'ಅಣ್ಣ' ಎಂದು ಆತ್ಮೀಯವಾಗಿ ಕರೆದು ಎದೆಗಪ್ಪಿಕೊಂಡು ಬಾಳದ್ದಾರೆ ಎಂದು ಶ್ರೀ ಹೆಚ್. ವಿ. ವೀರಭದ್ರಯ್ಯನವರು ಉಪನ್ಯಾಸ ಮಾಡಿದರು.

ಧರ್ಮವೆಂಬುದು ಕಲ್ಪನೆಯ ವಸ್ತುವಲ್ಲ, ವಿದ್ವತ್ತಿನ ಪ್ರದರ್ಶನವಲ್ಲ, ಲಾಂಚನಗಳ ಮೆರವಣಿಗೆಯಲ್ಲ, ದೈಹಿಕ ಅಥವಾ ಭೌತಿಕ ಬಲವಲ್ಲ, ಅದು ಅತ್ತವರ ಕಣ್ಣೀರು ಒರೆಸುವ ಹೃದಯವಂತಿಕೆ ಬಿದ್ದವರನ್ನು ಬೀಳುತ್ತಿರುವವರನ್ನು, ಬೀಳಲಿರುವವರನ್ನೂ ಕೈ ಹಿಡಿದು ಎತ್ತುವ ವಿಶೇಷ ಶಕ್ತಿ. ಬಸವಣ್ಣ ಈ ದೃಷ್ಟಿಯಲ್ಲಿ ದೊಡ್ಡವರು. ಅವರು ಪದವಿಗೆ, ಪಟ್ಟಕ್ಕೆ, ಪ್ರದರ್ಶನಕ್ಕೆ, ಪ್ರಭಾವಕ್ಕೆ ಆಶೆಪಡಲಿಲ್ಲ. ದೀನರಿಗೆ, ದಲಿತರಿಗೆ, ದುಃಖಿಗಳಿಗೆ, ಮಾದರರಿಗೆ, ಹೊಲೆಯರಿಗೆ, ಡೋಹರರಿಗೆ, ಮಡಿವಾಳರಿಗೆ, ತನ್ನನ್ನು ತೇದುಕೊಂಡ. "ಅಪ್ಪನು ಮಾದಾರ ಚನ್ನಯ್ಯ, ಬೊಪ್ಪನು ಡೋಹರಕಕ್ಕಯ್ಯನೆಂದ"–ವಿನಯಮೂರ್ತಿ, ಜಗತ್ತಿನ ಕಲ್ಯಾಣಕ್ಕೆ 'ಕಾಯಕ –ದಾಸೋಹ' ದ ದಿವ್ಯಮಂತ್ರ ನೀಡಿದ ಸಂಚಪುರುಷದ ಮೂರ್ತಿ ಲಿಂಗಪೂಜಾನಿಷ್ಠೆಯಿಂದ ತನ್ನ ಒಳ-ಹೊರಗನ್ನು ಸಂಪಡಿಸಿಕೊಂಡೇ ಅಸಾಮಾನ್ಯ ಸಂಸಾರಯೋಗಿ. ಅಂಥವರು ಬಹಳ ಅಪರೂಪ. ಅವರ ಸ್ಮರಣೆಯೂ ಒಂದು ಪುಣ್ಯವೇ–ಎಂದು ಪರಮ ಪೂಜ್ಯ ಶ್ರೀ ಶ್ರೀಗಳವರು ಆಶೀರ್ವಚನ ನೀಡಿದರು.

ರಾತ್ರೀ 10-30 ಘಂಟೆಯಿಂದ ಶ್ರೀ ಸಿದ್ಧಗಂಗಾ ಮಠದ ಶ್ರೀ ಸಿದ್ಧಲಿಂಗೇಶ್ವರ ನಾಟಕ ಮಂಡಳಿಯವರು ಜಗಜ್ಯೋತಿ ಬಸವೇಶ್ವರ ನಾಟಕ ಪ್ರದರ್ಶನವಾಯಿತು. ಸುತ್ತಿನ ಹತ್ತೂ ಹಳ್ಳಿಯ ಬಂಧುಗಳು ನಾಟಕ ನೋಡಿ ಆನಂದಿಸಿದರು.

ಮಂಡ್ಯದ ಹಿರಿಯರೊಬ್ಬರು ಮಂಡ್ಯದಲ್ಲಿಯೂ ಈ ನಾಟಕ ಆಡಿಸಬೇಕು ಎಂದು ವರದಿಗಾರನನ್ನು ಕೇಳಿದಾಗ ಪರಮ ಪೂಜ್ಯ ಶ್ರೀ ಶ್ರೀಗಳವರಲ್ಲಿ ಬಿನ್ನಹ ಮಾಡಿಕೊಳ್ಳಿ ಎಂದು ಹೇಳಬೇಕಾಯಿತು.

(ಮತ್ತೆ ಬರೆಯುತ್ತೇನೆ)

## ' ಹಳೆಯ ವಿದ್ಯಾರ್ಥಿ ಸಂಘದ '

### ಆಜೀವ ಸದಸ್ಯತ್ವ ಪಡೆದಿರುವವರು

216 ಶ್ರೀ ಬಿ ಎಲ್. ವೈಕ್ಕೇಶ್ವರ, ಉಪನ್ಯಾಸಕರು, ಸಿದ್ಧಗಂಗಾ ವಿಜ್ಞಾನ ಕಾಲೇಜು, ತುಮಕೂರು

217 ಶ್ರೀ ಡಿ. ಚಂದ್ರಪ್ಪ, ಉಪನ್ಯಾಸಕರು, ಎರಡನೇ ಮುಖ್ಯ ರಸ್ತೆ, ಎಸ್. ಐ ಟಿ. ಬಡಾವಣೆ, ತುಮಕೂರು.

218 ಶ್ರೀ ಆರ್. ಗಂಗಾಧರಪ್ಪ, ನಂ 1033, 4ನೇ 'ಎಂ' ವಿಭಾಗ, ರಾಜಾಜಿನಗರ, ಬೆಂಗಳೂರು–560010

219 ಶ್ರೀ ಎಚ್. ಸದಾಶಿವಯ್ಯ, ನಂ 737, 5ನೇ ವಿಭಾಗ, ರಾಜೇಂದ್ರ ಎಂಟರ್ ಪ್ರೈಸರ್ಸ್, ರಾಜಾಜಿನಗರ, ಬೆಂಗಳೂರು –560010

220 ಶ್ರೀ ಆರ್. ಶಿವರುದ್ರಯ್ಯ, ನಂ 675/18, 5ನೇ ವಿಭಾಗ, ರಾಜಾಜಿನಗರ, ಬೆಂಗಳೂರು–560010

221 ಶ್ರೀ ಹೆಚ್. ಸಿ. ಜಯಣ್ಣ, ನಂ 81, ಸೆಕ್ರಟೇರಿಯಟ್ ಕಾಲೋನಿ, ವಿಜಯನಗರ, ಬೆಂಗಳೂರು–560040

222 ಶ್ರೀ ಕೆ. ಎಸ್. ಚಂದ್ರಯ್ಯ, ಉಪಾಧ್ಯಾಯರು, ಕುರುಗುಂದ ತುಮಕೂರು ತಾಲ್ಲೋಕ್.

223 ಶ್ರೀ ಕೆ. ಲಿಂಗಪ್ಪ, ನಿವೃತ್ತ ಉಪಾಧ್ಯಾಯರು, ಅಮ್ಮನ ಘಟ್ಟ ಮತ್ತು ಅಂಚೆ, ಗುಬ್ಬಿ ತಾಲ್ಲೋಕ್.

224 ಶ್ರೀ ಶ್ರೀ ಶಾಂತವೀರ ಸ್ವಾಮಿಗಳು, ಕನ್ನೂರು ಮಠ, ಮಾರಸಂದ್ರ ಅಂಚೆ. ಮಾಗಡಿ ತಾಲ್ಲೋಕ್.

225 ಶ್ರೀ ಹೆಚ್. ಡಿ. ತಿಮ್ಮಪ್ಪ, ಎಲ್. ಡಿ. ಜಿ. 18, ಹೌಸಿಂಗ್ ಬೋರ್ಡ್ ಕಾಲೋನಿ, ಅರಸೀಕೆರೆ–573103

226 ಶ್ರೀ ಸಣ್ಣ ಭೀಮಣ್ಣ, ಎಸ್. ಡಿ. ಸಿ. ಸರ್ಕಾರಿ ಕಿರಿಯ ಕಾಲೇಜು, ಊಮದ ಪಡವು, ಉತ್ತರ ಕೆನರ ಜಿಲ್ಲೆ–574237

227 ಶ್ರೀ ಜಿ. ಎಂ. ಗುರುಮಲ್ಲಪ್ಪ, ಉಪಾಧ್ಯಾಯರು, ಕುಣಿಗಲ್ ರಸ್ತೆ, ತುಮಕೂರು–572102

228 ಶ್ರೀ ಎಂ. ಬಿ. ಕರಿಯಪ್ಪ, ಮಾನಗೊಂಡ ಹಳ್ಳಿ, ಕೊಯಿರ ಅಂಚೆ, ದೇವನಹಳ್ಳಿ ತಾಲ್ಲೋಕ್.

(ಮುಂದುವರಿಯುತ್ತದೆ